# PACKAGE TOURS - 2019

**Hotel Room Accom. & South Indian Veg. Food**

## Mini Andhra



**05 Days**
Nov 04
Dec 02

Mantralaya, Srishaila, Mahanandi, Ahobilam (Nava Narasimha)

## Kolkata Darjeeling



**16 Days**
Nov 04

Bhubaneshwar, Puri, Konark, Chilka Lake, Kolkata, Siliguri, Gangtok, Chengu Lake, Harbhajan Singh Mandir, Darjeeling

## Shaktipeetha Manali Special



**18 Days**
Sep 05
Oct 09

Wagah Border [Indo-Pak Border], Amritsar, Vaishnavi Devi, Chamunda, Kangra, Chintapurni, Jwalamukhi, Baijnath, Kullu-Manali, Vasista, Rohtang Pass [Optional], Naina Devi, Kufri, Shimla, Chandigarh, Kurukshetra, New Delhi

## Amarnath Yatra



**19 Days**
July 01

Attari Border [Indo-Pak Border], Amritsar, Katra, Vaishnavi Devi, Baltal, Amarnath, Gulmarg, Srinagar, Kurukshetra, New Delhi

## Nepal Special



**08 Days**
Sep 17
Oct 03, 15

Kathmandu, Manokamana, Pokhara, Jomsom, Mukthinath, Patan

## Charodham Yatra

**19 Days**



May 06
Jun 06
Sep 05, 16, 22
Oct 06, 09

Haridwar, Yamunotri, Gangotri, Uttarkashi, Kedarnath, Triyugi (Optional), Mana, Vyasa Guha, Ganesh Guha, Keshava Prayag, Badrinath, Rishikesh, New Delhi

## KAILASH & MANASA SAROVAR YATRA



**11 Days**
May 30
Jun 06, 11
July 04, 16
Aug 27 Sep 05

## SRILANKA



**07 Days**
Sep 17
Oct 15



# Shri Hansaa Travels

**Recognised by Department of Tourism, Govt. of Karnataka**

: 640, 40th Cross, 8th Block, Jayanagar, Bangalore - 70
: hansaatravels@gmail.com : hansaatravels.com
080-26643276 / 26543891 / 9341215612 / 9341415612



# ವಿವೇಕಪ್ರಭ

ಜೂನ್-2019

ಸಂಪುಟ 20 ಸಂಚಿಕೆ 06






ಪ್ರಾರ್ಥನೆ : ಜಗದ್ಗುರು ಶ್ರೀರಾಮಕೃಷ್ಣಸ್ತೋತ್ರ - ೧ 4

ಸೂಕ್ತಿಪ್ರಭ : ಒಳ್ಳೆಯತನ 4

ಸಂಪಾದಕೀಯ : ಸೇವೆ ಮತ್ತು ಆಧ್ಯಾತ್ಮಿಕತೆ 7

ವಚನವೇದದಿಂದ : ಧಾರ್ಮಿಕ ಆಚರಣೆಗಳು 10

ಸ್ವಾಮಿ ವಿವೇಕಾನಂದರಿಂದ ಸ್ಫೂರ್ತಿ ಪಡೆದ ಮಹಿಳೆಯರು:

ಮೀನಾ ಅಮ್ಮ 26

ಯುವ ಜಾಗೃತಿ : ಏಕಾಗ್ರತೆಯ ಕಥೆಗಳು 27

ಪುಸ್ತಕ ಪರಿಚಯ : 'Srimad Bhagavad Gita Insights and Significance' 32

'Swami Abhedananda - A Yogi Par Excellence' 34

ಉಪನಿಷತ್ ಪರಿಚಯ : ಅನ್ನದಿಂದ ಆನಂದದೆಡೆಗೆ... 35

ಚಿತ್ರಕಥೆ : ಭಗವಂತನ ಕೃಪೆ 38

ಸುದ್ದಿ ಸಂಚಯ : ರಾಮಕೃಷ್ಣ ಮಹಾಸಂಘದ ಚಟುವಟಿಕೆಗಳು: ಏಪ್ರಿಲ್ ೧೯ 42


## ವಿಶೇಷ ಲೇಖನ


ಶ್ರೀಮಾತೆಯವರ ಸಾನ್ನಿಧ್ಯದಲ್ಲಿ — *ಸ್ವಾಮಿ ನಿರ್ವಾಣಾನಂದ* 11

ಮಾನವ ಚೈತನ್ಯದ ಮೂಲ — *ಸ್ವಾಮಿ ರಂಗನಾಥಾನಂದ* 14


## ಧಾರಾವಾಹಿ


ಕಳೆದ ದಿನಗಳ ನೆನಪುಗಳು - ೨೯ — *ಸ್ವಾಮಿ ಶ್ರದ್ಧಾನಂದ* 16

ಆನಂದದ ಹುಡುಕಾಟ-೬ — *ಸ್ವಾಮಿ ಬ್ರಹ್ಮೇಶಾನಂದ* 21

ಶ್ರೀಮಾತೆಯವರ ಪತ್ರಗಳು - ೧೯ — *ಪ್ರವ್ರಾಜಿಕಾ ಧರ್ಮಪ್ರಾಣಾ* 30







ವ್ಯವಸ್ಥಾಪಕ ಸಂಪಾದಕರು: *ಸ್ವಾಮಿ ಮುಕ್ತಿದಾನಂದ*

ಸಂಪಾದಕರು: *ಸ್ವಾಮಿ ಜ್ಞಾನಯೋಗಾನಂದ*

ನೆರವು: *ಆರ್. ಎಸ್. ಪೂರ್ಣಾನಂದ,*
*ಡಾ. ಕೆ. ಎಲ್. ಪ್ರಸನ್ನಾಕ್ಷೀ,*
*ಡಾ. ಎಚ್. ಪಾಂಡುರಂಗ ವಿಠಲ*

ಅಕ್ಷರ ಜೋಡಣೆ: *ಶ್ರೀರಾಮಕೃಷ್ಣ ಆಶ್ರಮ, ಮೈಸೂರು*

ಮುದ್ರಣ: *ಮಯೂರ್ ಗ್ರಾಫಿಕ್ಸ್, ಬೆಂಗಳೂರು*


### ಮುಖಪುಟ

ಭಕ್ತಿ ಮಕರಂದದಲಿ ಮಧುಪನಾಗೈ ..

### ಚಂದಾ ವಿವರ

ಬಿಡಿ ಪ್ರತಿ : ₹ 14
ವಾರ್ಷಿಕ : ₹ 140
ಮೂರು ವರ್ಷ : ₹ 375
ಆಜೀವ (25 ವರ್ಷ) : ₹ 3,000
ಪೋಷಕರು : ₹ 5,000 ಅಥವಾ ಹೆಚ್ಚು.

ವಿದೇಶಗಳಿಗೆ : (ಏರ್‌ಮೇಲ್)
ವಾರ್ಷಿಕ : $ 20; ಮೂರು ವರ್ಷ: $ 60
ಆಜೀವ (25ವರ್ಷ): $ 300
ಪೋಷಕರು : $ 600 ಅಥವಾ ಹೆಚ್ಚು.

### ಈ ಪತ್ರಿಕೆಯ ಧ್ಯೇಯ

'ನಾವು ಪತ್ರಿಕೆಯ ಮೂಲಕ ಸಕಲ ವಿಚಾರಗಳಲ್ಲಿಯೂ ಜೀವನಪೋಷಕ ಆದರ್ಶಗಳನ್ನು ಜನರಿಗೆ ಕೊಡಬೇಕು... ವೇದವೇದಾಂತಗಳ ಉಚ್ಚ ಭಾವನೆಗಳನ್ನು ಸುಲಭವಾದ ಮಾತುಗಳಲ್ಲಿ ಜನರಿಗೆ ತಿಳಿಸಿಕೊಡಬೇಕು.'

*- ಸ್ವಾಮಿ ವಿವೇಕಾನಂದ*

ಚಂದಾ ಹಣವನ್ನು (Sri Ramakrishna Ashrama, Viveka Prabha A/c ಹೆಸರಿಗೆ) ಎಂ.ಓ. ಅಥವಾ ಡಿ.ಡಿ. ಮೂಲಕ ಮಾತ್ರ ಕಳುಹಿಸಬೇಕು. ಚೆಕ್‌ಗಳನ್ನು ಸ್ವೀಕರಿಸಲಾಗುವುದಿಲ್ಲ. ಆಜೀವ ಚಂದಾದಾರರು ಮತ್ತು ಪೋಷಕರಿಗೆ ಮೈಸೂರು ಆಶ್ರಮದ ಪುಸ್ತಕಗಳ ಮೇಲೆ ಮೈಸೂರು ಆಶ್ರಮದ ಮೂಲಕ ನೇರವಾಗಿ ಕೊಂಡಾಗ ಮಾತ್ರ ಶೇ. 20 ರಷ್ಟು ರಿಯಾಯಿತಿ ಕೊಡಲಾಗುವುದು. ಪೋಷಕ ಸಹಾಯಧನಕ್ಕೆ 80-G ಅಧಿನಿಯಮದ ಪ್ರಕಾರ ವರಮಾನ ತೆರಿಗೆ ವಿನಾಯಿತಿ ಇದೆ. ಪೋಷಕರ ಹೆಸರನ್ನು ಪತ್ರಿಕೆಯಲ್ಲಿ ಪ್ರಕಟಿಸಲಾಗುವುದು.


E-mail: mysuru.vivekaprabha@rkmm.org
Website: www.vivekaprabha.net
ಫೋನ್ : 9481533505

ಪ್ರಾರ್ಥನೆ

# ಜಗದ್ಗುರು ಶ್ರೀರಾಮಕೃಷ್ಣಸ್ತೋತ್ರ – ೧

**ಲೋಕನಾಥಶ್ಚಿದಾಕಾರೋ ರಾಜಮಾನಃ ಸ್ವಧಾಮನಿ ।**
**ಕಲಿಕಲ್ಮಷಮಗ್ನಾನಾಮುತ್ತಾರಣ-ಚಿಕೀರ್ಷಯಾ ॥**
**ಮಾಯಾಶಕ್ತಿಂ ಸಮಾಶ್ರಿತ್ಯ ಯೋಽವತೀರ್ಣೋ ಮಹೀತಲೇ ।**
**ನಮೋಽಸ್ತು ರಾಮಕೃಷ್ಣಾಯ ತಸ್ಮೈ ಶ್ರೀಗುರವೇ ನಮಃ ॥ ೧ ॥**



ಸಕಲ ಲೋಕಗಳಿಗೆ ಒಡೆಯನೂ, ಜ್ಞಾನ ಸ್ವರೂಪಿಯೂ ಆದ, ತನ್ನ ದಿವ್ಯ ಧಾಮದಲ್ಲಿ ಪ್ರಕಾಶದಿಂದ ಬೆಳಗುತ್ತಿರುವ, ಕಲಿಯ ಕಲ್ಮಶವಾದ ಕಾಮಕ್ರೋಧಾದಿಗಳಲ್ಲಿ ಮಗ್ನರಾಗಿರುವ ಜನರನ್ನು ಉದ್ಧರಿಸುವ ಇಚ್ಛೆಯಿಂದ ಮಾಯಾಶಕ್ತಿಯನ್ನು ಆಶ್ರಯಿಸಿ ಈ ಭೂಮಂಡಲದಲ್ಲಿ ಅವತಾರ ಮಾಡಿರುವ ಶ್ರೀಗುರು ಶ್ರೀರಾಮಕೃಷ್ಣರಿಗೆ ನಮಸ್ಕಾರ.

**ಸದ್ಬ್ರಾಹ್ಮಣಕುಲೇ ಜಾತೋ ದಿವ್ಯದೇಹಂ ಸಮಾಶ್ರಿತಃ ।**
**ಬಾಲ್ಯೇ ಯೋ ದಿವ್ಯಭಾವೇನ ವಯಸ್ಯೈಃ ಸಹ ಮೋದಯನ್ ॥**
**ವಿರಕ್ತೋ ಯೌವನೇ ತೀವ್ರಂ ಮಾಯಾಪಾಶ-ವಿವರ್ಜಿತಃ ।**
**ನಿತ್ಯಮುಕ್ತ-ಸ್ವಭಾವೋಽಪಿ ಲೋಕಾನುಗ್ರಹಕಾಮತಃ ॥ ೨ ॥**

ಬಾಲ್ಯದಲ್ಲಿಯೇ ಸ್ನೇಹಿತರೊಡನೆ ಆಡುತ್ತಾ ಆನಂದದಲ್ಲಿ ತನ್ಮಯನಾಗಿದ್ದ, ಯೌವನದಲ್ಲಿ ತೀವ್ರ ವೈರಾಗ್ಯವನ್ನು ಹೊಂದಿದ, ಮಾಯಾಪಾಶವನ್ನು ಕಳಚಿಕೊಂಡ, ನಿತ್ಯ-ಮುಕ್ತ-ಸ್ವಭಾವದವರಾದರೂ ಲೋಕವನ್ನು ಅನುಗ್ರಹಿಸುವ ಬಯಕೆಯಿಂದ ದಿವ್ಯ ದೇಹವನ್ನು ಆಶ್ರಯಿಸಿ, ಉತ್ತಮವಾದ ಬ್ರಾಹ್ಮಣ ಕುಲದಲ್ಲಿ ಜನಿಸಿದ — ಸದ್ಗುರು ಶ್ರೀರಾಮಕೃಷ್ಣರಿಗೆ ನಮಸ್ಕಾರ.

**ಲೋಕಾನಾಮೇವ ಶಿಕ್ಷಾರ್ಥಂ ತಪಸ್ತಪ್ತ್ವಾ ಸುದುಸ್ತರಮ್ ।**
**ನಿದ್ರಾಶನಂ ಪರಿತ್ಯಜ್ಯ ವರ್ಷಾಣಾಂ ದ್ವ್ಯಧಿಕಾನ್ ದಶ ॥**
**ಸ್ವಸ್ವರೂಪಂ ಸಮಾಧಾಯ ಸಚ್ಚಿದಾನಂದ-ವಿಗ್ರಹಮ್ ।**
**ದಯಾಮೂರ್ತಿಃ ಸದಾನಂದೋ ಜಿಜ್ಞಾಸೂನುಪದಿಷ್ಟವಾನ್ ॥**
**ತೇಷಾಮಜ್ಞಾನನಾಶಾಯ ಲಾಭಾಯ ಚ ಪರಾತ್ಮನಃ ।**
**ನಮೋಽಸ್ತು ರಾಮಕೃಷ್ಣಾಯ ತಸ್ಮೈ ಶ್ರೀಗುರವೇ ನಮಃ ॥ ೩ ॥**

ಹನ್ನೆರಡು ವರ್ಷಗಳಿಗೂ ಹೆಚ್ಚು ಕಾಲ ನಿದ್ರೆ, ಊಟಗಳನ್ನು ಬಿಟ್ಟು , ಜೀವಿಗಳಿಗೆ ಶಿಕ್ಷಣ ನೀಡಲು ಅತ್ಯಂತ ಕಠಿಣವಾದ ತಪಸ್ಸನ್ನು ಆಚರಿಸಿದ, ತನ್ನ ನಿಜವಾದ ಸ್ವರೂಪವಾದ ಸಚ್ಚಿದಾನಂದ ವಿಗ್ರಹವನ್ನು ಹೊಂದಿದ್ದರೂ ಅಪಾರ ಕರುಣೆಯನ್ನು ಹೊಂದಿ, ಪರತತ್ತ್ವವನ್ನು ತಿಳಿದುಕೊಳ್ಳುವ ಬಯಕೆಯುಳ್ಳವರಿಗೆ ಅವರ ಅಜ್ಞಾನವನ್ನು ನಾಶ ಮಾಡಿ ತತ್ತ್ವೋಪದೇಶವನ್ನು ಮಾಡಿದ, ಸದಾನಂದ ಸ್ವರೂಪಿಯಾದ ಪರಮಗುರು ಶ್ರೀರಾಮಕೃಷ್ಣರಿಗೆ ನಮಸ್ಕಾರ.

— ಸ್ವಾಮಿ ಅಭೇದಾನಂದ

ಸೂಕ್ತಿಪ್ರಭ

## ಒಳ್ಳೆಯತನ

**ಎ**ಲ್ಲಿ ಸರಳತೆ, ಒಳ್ಳೆಯತನ, ಸತ್ಯಗಳಿಲ್ಲವೋ, ಅಲ್ಲಿ ಶ್ರೇಷ್ಠತೆಯಿರಲಾರದು.

— ಲಿಯೋ ಟಾಲ್‌ಸ್ಟಾಯ್

**ಮುಂ**ಗೋಪಿಯನ್ನು ಕೋಪಗೊಳ್ಳದೆ ಇರುವ ಮೂಲಕ ಗೆಲ್ಲು. ಕೆಟ್ಟವನನ್ನು ಒಳ್ಳೆಯತನದಿಂದ ಗೆಲ್ಲು. ಜಿಪುಣನನ್ನು ಉದಾರತನದಿಂದ ಗೆಲ್ಲು. ಸುಳ್ಳುಗಾರನನ್ನು ಸತ್ಯದಿಂದ ಗೆಲ್ಲು.

— ಗೌತಮ ಬುದ್ಧ

**ಒ**ಳ್ಳೆಯವನು ಹೇಗಿರಬೇಕೆಂದು ಚರ್ಚೆ ಮಾಡುತ್ತಲೇ ಇರಬೇಡ; ಒಳ್ಳೆಯವನಾಗಿರು, ಸಾಕು.

— ಮಾರ್ಕಸ್ ಒರೆಲಿಯಸ್

**ಹೂ**ವಿನ ಸುಗಂಧವು ಗಾಳಿ ಬೀಸಿದ ದಿಕ್ಕಿನಲ್ಲಿ ಮಾತ್ರ ಹರಡುವುದು. ಆದರೆ ಒಬ್ಬ ವ್ಯಕ್ತಿಯ ಒಳ್ಳೆಯತನ ಎಲ್ಲೆಡೆ ಹರಡುವುದು.

— ಚಾಣಕ್ಯ

**ಎಂ**ದಿಗೂ ವಿಫಲವಾಗದ ಬಂಡವಾಳವೆಂದರೆ ಒಳ್ಳೆಯತನವೊಂದೇ.

— ಡೇವಿಡ್ ಹೆನ್ರಿ ಥೋರೋ

**ತಾ**ಳ್ಮೆಗೆ ಸಮಾನವಾದ ತಪಸ್ಸಿಲ್ಲ. ತೃಪ್ತಿಗಿಂತ ಹೆಚ್ಚಿನ ಸುಖವಿಲ್ಲ. ಆಸೆಗೆ ಸಮಾನವಾದ ರೋಗವಿಲ್ಲ. ದಯೆಗಿಂತ ಹೆಚ್ಚಿನ ಧರ್ಮವಿಲ್ಲ.

— ಸುಭಾಷಿತ

**ನಾ**ವು ಸ್ವತಃ ಪರಿಶುದ್ಧರಾಗಿರುವುದು, ಇತರರಿಗೆ ಒಳ್ಳೆಯದನ್ನು ಮಾಡುವುದು — ಇದೇ ಎಲ್ಲ ಪೂಜೆಯ ಸಾರ. ಯಾರು ದೀನರಲ್ಲಿ, ದುರ್ಬಲರಲ್ಲಿ, ರೋಗಿಗಳಲ್ಲಿ ಶಿವನನ್ನು ನೋಡುವರೋ ಅವರೇ ನಿಜವಾಗಿ ಶಿವನನ್ನು ಪೂಜಿಸುವವರು. ಒಬ್ಬನು ಕೇವಲ ವಿಗ್ರಹದಲ್ಲಿ ಮಾತ್ರ ಶಿವನನ್ನು ನೋಡಿದರೆ ಅವನ ಪೂಜೆ ಬರಿಯ ಗೌಣ.

— ಸ್ವಾಮಿ ವಿವೇಕಾನಂದ



# ರಾಮಕೃಷ್ಣ ಮಠ, ರಾಮನಾಥಪುರಂ

No. 1, Raja Aranmanai Mele Street, Ramanathapuram (Ramnad),
Tamil Nadu 623 501 Ph : 98849 88178 Email : ramanathapuram@rkmm.org



## ಬಡಜನತೆ ಹಾಗೂ ಸಂತ್ರಸ್ತರಿಗಾಗಿ ಶೈಕ್ಷಣಿಕ, ವೈದ್ಯಕೀಯ ಸೇವೆ

ಪಾಶ್ಚಾತ್ಯ ದೇಶಗಳಲ್ಲಿ ನಮ್ಮ ಸನಾತನ ಧರ್ಮದ ಸಂದೇಶವನ್ನು ಪ್ರಚಾರ ಮಾಡುವುದಕ್ಕಾಗಿ ತೆರಳಿದ್ದ ಸ್ವಾಮಿ ವಿವೇಕಾನಂದರು ೧೮೯೭ರಲ್ಲಿ ಭಾರತಕ್ಕೆ ಮರಳಿದಾಗ ರಾಮನಾಥಪುರದ ಮಹಾರಾಜರಾದ ಶ್ರೀ ಭಾಸ್ಕರ ಸೇತುಪತಿಯವರು ಅವರಿಗೆ ಸಂಭ್ರಮದ ಸ್ವಾಗತವನ್ನು ಮಾಡಿದರು. ಸ್ವಾಮೀಜಿಯವರು ಮಹಾರಾಜ ಭಾಸ್ಕರ ಸೇತುಪತಿಯ ಅರಮನೆಯ ಅತಿಥಿ ಗೃಹದಲ್ಲಿ ೧೮೯೭ ರ ಜನವರಿ ೨೯ರಿಂದ ೩೧ರ ವರೆಗೆ, ಮೂರು ದಿನ ತಂಗಿದ್ದರು. ಅಲ್ಲಿ ಅವರು ಮಾಡಿದ ಭಾಷಣಗಳು ಭಾರತದ ಉದ್ದಗಲಕ್ಕೂ ಪ್ರಚಾರವಾಗಿ, ರಾಷ್ಟ್ರಜಾಗೃತಿಗೆ ನೆರವಾಯಿತು.

ಆ ಪ್ರದೇಶದಲ್ಲಿ ಇದೀಗ ರಾಮಕೃಷ್ಣ ಮಠದ ಹೊಸ ಶಾಖೆ ಆರಂಭಗೊಂಡಿದೆ. ೨೦೧೬ರ ಜೂನ್ ೨೬ರಂದು ಇದು ಬೇಲೂರು ಮಠದಲ್ಲಿರುವ ರಾಮಕೃಷ್ಣ ಮಠ ಹಾಗೂ ಮಿಷನ್ನಿಗೆ ಅಧಿಕೃತವಾಗಿ ಸೇರ್ಪಡೆಗೊಂಡಿತು. ನಗಚಿ, ಮಂಡಪಂ, ಪಾಂಬನ್ ಹಾಗೂ ರಾಮೇಶ್ವರಂ ಪ್ರದೇಶಗಳಲ್ಲಿ ವಾಸಿಸುತ್ತಿರುವ ಜನರಲ್ಲಿ ಬಹುಪಾಲು ಮೀನುಗಾರರಾಗಿದ್ದು , ಬಡತನದ ಕಾರಣದಿಂದ ಅವರ ಮಕ್ಕಳು ಕೂಡ ಮೀನು ಹಿಡಿಯುವ ಕೆಲಸ ಮಾಡಬೇಕಾಗಿದೆ; ಅವರು ವಿದ್ಯಾಭ್ಯಾಸ ಹಾಗೂ ಉನ್ನತ ಶಿಕ್ಷಣ ನಡೆಸಲಾಗದ ಪರಿಸ್ಥಿತಿಯನ್ನು ಎದುರಿಸುತ್ತಿದ್ದಾರೆ. ಹೊಸದಾಗಿ ಆರಂಭವಾಗಿರುವ ರಾಮಕೃಷ್ಣ ಮಠವು ಈ ದಿಕ್ಕಿನಲ್ಲಿ ಈ ಕೆಳಗಿನ ಸೇವಾ ಕಾರ್ಯಗಳನ್ನು ನಡೆಸಲು ಉದ್ದೇಶಿಸಿದ್ದು, ಈ ಕಾರ್ಯವು ಸಫಲವಾಗಲು ತಮ್ಮಿಂದ ಉದಾರ ಆರ್ಥಿಕ ನೆರವನ್ನು ಕೋರುತ್ತಿದೆ:

| | |
|---|---|
| 1. | **ಶೈಕ್ಷಣಿಕ ಸೇವೆ:** 80 ಮಂದಿ ವಿದ್ಯಾರ್ಥಿಗಳಿಗೆ ನರ್ಸಿಂಗ್, ಪಾಲಿಟೆಕ್ನಿಕ್ ಹಾಗೂ ಕಲಾ-ವಿಜ್ಞಾನ ವಿಭಾಗಗಳಲ್ಲಿ ಉನ್ನತ ಶಿಕ್ಷಣಕ್ಕಾಗಿ ಪ್ರತಿ ವಿದ್ಯಾರ್ಥಿಗೆ ಒಂದು ವರ್ಷಕ್ಕೆ 30,000; ಒಟ್ಟು ಮೊತ್ತ 24 ಲಕ್ಷ |
| 2. | **ಸಂಚಾರಿ ವೈದ್ಯಕೀಯ ಸೇವೆ:** ಇದರಿಂದ ಕೀಲನಗಾಚಿ ಹಾಗೂ ಇತರ ಸಮೀಪದ ಹಳ್ಳಿಗಳಲ್ಲಿ ಮೊಬೈಲ್ ವೈದ್ಯಕೀಯ ಸೇವೆಗೆ ವರ್ಷಕ್ಕೆ 6 ಲಕ್ಷ ರೂ. |
| 3. | **ಕೋಚಿಂಗ್ ಕ್ಲಾಸ್:** 75 ಮಂದಿ ಬಡ ವಿದ್ಯಾರ್ಥಿಗಳಿಗೆ ಉಚಿತ ಶೈಕ್ಷಣಿಕ ತರಬೇತಿಯೊಂದಿಗೆ ಆಹಾರ, ಸಮವಸ್ತ್ರ, ನೋಟ್ ಪುಸ್ತಕ, ಟೂತ್‌ಪೇಸ್ಟ್ ಹಾಗೂ ಇತರ ಶೌಚಾಲಯ ಸಾಮಗ್ರಿಗಳಿಗೆ ವರ್ಷಕ್ಕೆ 4 ಲಕ್ಷ ರೂ. |
| 4. | **ಹೊಲಿಗೆ ತರಬೇತಿ:** ಬಡ ಹೆಣ್ಣುಮಕ್ಕಳಿಗೆ 3 ತಿಂಗಳ ಹೊಲಿಗೆ ತರಬೇತಿಗಾಗಿ ಹಾಗೂ ಅವರ ಜೀವನೋಪಾಯಕ್ಕೆ ಹೊಲಿಗೆ ಯಂತ್ರ ಒದಗಿಸಿ ಕೊಡಲು ವರ್ಷಕ್ಕೆ 6 ಲಕ್ಷ ರೂ. |
| 5. | **500 ಮಂದಿ ಬಡ ವಿದ್ಯಾರ್ಥಿಗಳಿಗೆ ಶಾಲಾ ಸಮವಸ್ತ್ರ:** ವರ್ಷಕ್ಕೆ 3 ಲಕ್ಷ ರೂ. |
| 6. | **10 ಮಂದಿ ಬಡ ವಿದ್ಯಾರ್ಥಿಗಳಿಗೆ ಶಾಲಾ ಸಮವಸ್ತ್ರ:** ವರ್ಷಕ್ಕೆ 6000 ರೂ. |
| 7. | **ಸಾಧು ನಿವಾಸ ಹಾಗೂ ಸಭಾಂಗಣದ ನಿರ್ಮಾಣಕ್ಕೆ :** 2.15 ಕೋಟಿ ರೂ. |

**ಈ ಮೇಲಿನ ಚಟುವಟಿಕೆಗಳಿಗಾಗಿ ನೀವು 10,000/- ಹಾಗೂ ಹೆಚ್ಚಿನ ಮೊತ್ತದ 'ಶಾಶ್ವತ ನಿಧಿ'ಯನ್ನು ಮಾಡಬಹುದಾಗಿದೆ.**

ಈ ಸೇವಕಾರ್ಯದಲ್ಲಿ ಆರ್ಥಿಕ ನೆರವು ನೀಡುವ ಮೂಲಕ ಭಗವಂತನ ಮಕ್ಕಳ ಬೆಳವಣಿಗೆಗೆ ನೆರವಾಗಲು ಹಾಗೂ ಅದರಿಂದ ದೇವರ ಅನುಗ್ರಹಕ್ಕೆ ಪಾತ್ರರಾಗಲು ತಮ್ಮಲ್ಲಿ ನಾವು ಪ್ರಾರ್ಥಿಸಿಕೊಳ್ಳುತ್ತಿದ್ದೇವೆ.

ಎಲ್ಲ ದೇಣಿಗೆಗಳಿಗೂ 1961ರ 80G ಆದಾಯ ತೆರಿಗೆ ಕಾಯಿದೆಯನ್ವಯ ವಿನಾಯಿತಿ ಇರುತ್ತದೆ. ಚೆಕ್, ಡ್ರಾಫ್ಟ್, ಮನಿಆರ್ಡರ್‌ಗಳನ್ನು ''Ramakrishna Math, Ramanathapuram'' ಎಂಬ ಹೆಸರಿನಲ್ಲಿ ತೆಗೆದು ನಮಗೆ ಕಳುಹಿಸಿಕೊಡಬಹುದಾಗಿದೆ. ಇದೇ ರೀತಿ, RTGS ಮೂಲಕ ಕೆಳಗೆ ನೀಡಿರುವ ಖಾತೆಗೆ ಹಣವನ್ನು ವರ್ಗಾಯಿಸಬಹುದು. **ಹಣವನ್ನು ವರ್ಗಾಯಿಸಿದ ಬಳಿಕ ತಮ್ಮ ಹೆಸರು, ವಿಳಾಸ ಹಾಗೂ PAN ನಂಬರ್ ಇವನ್ನು ನಮಗೆ ತಿಳಿಸಿಕೊಡಬೇಕಾಗಿ ವಿನಂತಿ.**

| | |
|---|---|
| Account name | : Ramakrishna Math |
| Account Number | : 6426034057 |
| Bank | : Indian Bank |
| IFS Code | : IDIB000R051 |
| Branch | : Ramanathapuram |

ಇತಿ ಭಗವತ್ಸೇವೆಯಲ್ಲಿ ತಮ್ಮ,
ಸ್ವಾಮಿ ಸುತಪಾನಂದ
ಅಧ್ಯಕ್ಷರು


ಸಂಚಾರಿ ವೈದ್ಯಕೀಯ ವಾಹನ


ಹೊಲಿಗೆ ತರಬೇತಿ


ವೈದ್ಯಕೀಯ ಶಿಬಿರ


ಸ್ಕಾಲರ್‌ಶಿಪ್


ಕೋಚಿಂಗ್ ಕ್ಲಾಸ್



# SRI RAMAKRISHNA ADVAITA ASHRAMA

Ashrama Road, Kalady -683574, Dist. Ernakulam, Kerala
Email: kalady@rkmm.org Ph: 0484-2462345/2461071

## ಭಕ್ತರು ಹಾಗೂ ಹಿತೈಷಿಗಳಲ್ಲಿ ಒಂದು ವಿಜ್ಞಾಪನೆ



ಕಾಲಡಿಯು ಶಿವನ ಅವತಾರವಾದ, ಮಹಾನ್ ಆಧ್ಯಾತ್ಮಿಕ ವ್ಯಕ್ತಿಯೂ, ಅದ್ವೈತ ವೇದಾಂತದ ಸಂಸ್ಥಾಪಕರೂ ಆದ **ಆದಿ ಶಂಕರಾಚಾರ್ಯ**ರ ಜನ್ಮಸ್ಥಳವಾಗಿದೆ. ಆಶ್ರಮವು ಪೂರ್ಣಾನದಿಯ ದಡದಲ್ಲಿದೆ. 1936ರಲ್ಲಿ ಆರಂಭವಾದ ಈ ಆಶ್ರಮವು 1941ರಲ್ಲಿ ಬೇಲೂರು ಮಠದ ರಾಮಕೃಷ್ಣ ಮಠಕ್ಕೆ ಸೇರ್ಪಡೆಗೊಂಡಿತು. ಸ್ವಾಮಿ ಬ್ರಹ್ಮಾನಂದರ ಶಿಷ್ಯರಾಗಿದ್ದ ಸ್ವಾಮಿ ಆಗಮಾನಂದರು ಈ ಆಶ್ರಮದ ಸ್ಥಾಪಕ ಅಧ್ಯಕ್ಷರಾಗಿದ್ದರು. ಆಶ್ರಮವು ಆರಂಭವಾದ ನಂತರ ಅದು ಕೇರಳದಲ್ಲಿ ಆಧ್ಯಾತ್ಮಿಕತೆ, ಸಾಮಾಜಿಕ ಅಭಿವೃದ್ಧಿ ಹಾಗೂ ಸೇವಾಕಾರ್ಯಗಳ ಒಂದು ಮುಖ್ಯ ಕಾರ್ಯಕ್ಷೇತ್ರವೆನಿಸಿದೆ. ಕಳೆದ 77 ವರ್ಷಗಳಿಂದ ನಾವು ಸಮಾಜ ಕಲ್ಯಾಣ ಹಾಗೂ ಶೈಕ್ಷಣಿಕ ಕ್ಷೇತ್ರಗಳಲ್ಲಿ ಅಮೂಲ್ಯ ಸೇವೆಯನ್ನು ಅನವರತ ಸಲ್ಲಿಸುತ್ತಿದ್ದೇವೆ.

ಆಶ್ರಮವು ವಿವಿಧ ಶೈಕ್ಷಣಿಕ ಸಂಸ್ಥೆಗಳ, ವಿದ್ಯಾರ್ಥಿನಿಲಯ, ಸಮಾಜ ಕಲ್ಯಾಣ ಕೇಂದ್ರ, ಕಂಪ್ಯೂಟರ್ ಹಾಗೂ ಬೆರಳಚ್ಚು ತರಬೇತಿ ಕೇಂದ್ರಗಳ ಮೂಲಕ ವೈವಿಧ್ಯಮಯವಾದ ಸಮಾಜಸೇವಾ ಕಾರ್ಯಗಳನ್ನು ನಡೆಸುತ್ತಿದೆ. ಈ ಆಶ್ರಮದ ಆವರಣದಲ್ಲಿ ವಿಶ್ವಭ್ರಾತೃತ್ವ ಮಂದಿರ, ಸಭಾಂಗಣಗಳು ಹಾಗೂ ಶಾಲೆಗಳಿವೆ. (ಶಾಲೆಯಲ್ಲಿ ಕಿಂಡರ್‌ಗಾರ್ಟನ್ ನಿಂದ +2 ವರೆಗಿನ ವಿದ್ಯಾರ್ಥಿಗಳು ಓದುತ್ತಿದ್ದಾರೆ. ಅವರಿಗೆ ಶಾಲಾವಾಹನ, ಕ್ರೀಡಾಂಗಣ, ಗ್ರಂಥಾಲಯ ಮೊದಲಾದ ಸೌಲಭ್ಯಗಳನ್ನು ಒದಗಿಸಲಾಗುತ್ತಿದೆ.) 1966ರಿಂದ ಆಶ್ರಮವು ಬುಡಕಟ್ಟು ವಿದ್ಯಾರ್ಥಿನಿಲಯವನ್ನು ನಡೆಸುತ್ತಿದೆ. ಪರಿಶಿಷ್ಟ ಜಾತಿಯ ವಿದ್ಯಾರ್ಥಿಗಳಿಗಾಗಿ ಒಂದು ಕಂಪ್ಯೂಟರ್ ಹಾಗೂ ಬೆರಳಚ್ಚು ತರಬೇತಿ ಕೇಂದ್ರವನ್ನೂ ಆಶ್ರಮ ನಡೆಸುತ್ತಿದ್ದು, ಅದು ಅವರಿಗೆ ಸರ್ಕಾರಿ ಹಾಗೂ ಖಾಸಗಿ ಕಂಪೆನಿಗಳಲ್ಲಿ ಉದ್ಯೋಗ ಪಡೆಯಲು ನೆರವಾಗುತ್ತಿದೆ. ಮುವಾಟ್ಟುಪುಳ ಎಂಬಲ್ಲಿ ಈ ಆಶ್ರಮದ ಉಪಕೇಂದ್ರವೂ ಕಾರ್ಯ ನಿರ್ವಹಿಸುತ್ತಿದೆ.

ಈ ಮೇಲಿನ ಚಟುವಟಿಕೆಗಳನ್ನು ನಡೆಸಿಕೊಂಡು ಬರಲು ಆಶ್ರಮವು ಪ್ರಧಾನವಾಗಿ ನಿಮ್ಮಂತಹ ಭಕ್ತರ ಹಾಗೂ ಹಿತೈಷಿಗಳ ಆರ್ಥಿಕ ನೆರವನ್ನೇ ಆಶ್ರಯಿಸಬೇಕಾಗಿದೆ. ಹಲವು ಬಾರಿ ದಾನ-ದತ್ತಿಗಳ ಕೊರತೆ, ಹಣದುಬ್ಬರ ಮುಂತಾದ ಕಾರಣಗಳಿಂದ ಆರ್ಥಿಕ ಕೊರತೆಯ ಪರಿಸ್ಥಿತಿಯುಂಟಾಗಿದೆ. ಈ ಕಾರಣಗಳಿಂದ ತಾವು ನಮ್ಮ ಉದಾತ್ತ ಸೇವಾಕಾರ್ಯಗಳಿಗೆ ನೆರವಾಗುವಂತೆ, ಉದಾರವಾಗಿ ಧನಸಹಾಯ ಮಾಡಲು ಹಾಗೂ ತಮ್ಮ ಬಂಧು-ಮಿತ್ರರಿಗೂ ಈ ದಿಕ್ಕಿನಲ್ಲಿ ಪ್ರೇರಣೆ ನೀಡಲು ತಮ್ಮನ್ನು ಕಳಕಳಿಯಿಂದ ವಿನಂತಿಸಿಕೊಳ್ಳುತ್ತಿದ್ದೇವೆ.

| ಕ್ರ. ಸಂ. | ಚಟುವಟಿಕೆ | ವಾರ್ಷಿಕ ವೆಚ್ಚವನ್ನು ಪೂರೈಕೆ ಮಾಡಲು ತಗಲುವ ಕನಿಷ್ಠ ಧನಸಹಾಯ |
|---|---|---|
| 1. | **ನಿತ್ಯ ಸೇವಾಕಾರ್ಯಗಳು** – ಶ್ರೀರಾಮಕೃಷ್ಣರ ಪೂಜೆ, ಜಯಂತಿ ಉತ್ಸವಗಳು, ಆಶ್ರಮ ನಿವಾಸ-ನಿರ್ವಹಣೆ, ನಿತ್ಯ ಅನ್ನದಾನ ಹಾಗೂ ಸಾಧುಸೇವೆ. | 25 ಲಕ್ಷ ರೂ. |
| 2. | **ಶೈಕ್ಷಣಿಕ** – ಶಾಲಾ ಚಟುವಟಿಕೆಗಳ ನಿರ್ವಹಣೆ, ಕಟ್ಟಡಗಳ ನಿರ್ವಹಣೆ, ಶಾಲಾ ಚಟುವಟಿಕೆಗಳ ಆಧುನೀಕರಣ ಹಾಗೂ ಉನ್ನತೀಕರಣ, ಬಡ ವಿದ್ಯಾರ್ಥಿಗಳಿಗೆ ನೆರವು ನೀಡುವ ನಿಧಿ, ಸ್ಕಾಲರ್‌ಶಿಪ್ ಇತ್ಯಾದಿ. | 10 ಲಕ್ಷ ರೂ. |
| 3. | **ಸಮಾಜ ಅಭಿವೃದ್ಧಿ ಹಾಗೂ ಕಲ್ಯಾಣ ಸೇವಾಕಾರ್ಯಗಳು** – ಶ್ರೀರಾಮಕೃಷ್ಣ ಗುರುಕುಲಂ ವಿದ್ಯಾರ್ಥಿನಿಲಯದ ಖರ್ಚುವೆಚ್ಚಗಳು, ಪರಿಶಿಷ್ಟ ವರ್ಗ ಕಲ್ಯಾಣ, ಪರಿಶಿಷ್ಟ ಜಾತಿ ತರಬೇತಿ ಕೇಂದ್ರ, ಕಂಪ್ಯೂಟರ್ ಹಾಗೂ ಬೆರಳಚ್ಚು ತರಬೇತಿ ಕೇಂದ್ರ, ಬಡವರಿಗೆ ಹಾಗೂ ವಿಧವೆಯರಿಗೆ ಆರ್ಥಿಕ ನೆರವು ಇತ್ಯಾದಿ. | 15 ಲಕ್ಷ ರೂ. |
| 4. | **ಹೊಸ ಜನರೇಟರ್ ಖರೀದಿ** – ಮಂದಿರ, ಆಫೀಸು, ಗುರುಕುಲ ವಿದ್ಯಾರ್ಥಿನಿಲಯ, ಸಾಧು ನಿವಾಸ ಹಾಗೂ ಅತಿಥಿ ಗೃಹ ಇವುಗಳಿಗೆ ಹೆಚ್ಚುವರಿ ವಿದ್ಯುತ್ ಪೂರೈಕೆಗಾಗಿ. | 6 ಲಕ್ಷ ರೂ. |

ತಮ್ಮ ದೇಣಿಗೆಯನ್ನು ನೀವು ಚೆಕ್/ಡಿ.ಡಿ.(''Sri Ramakrishna Advaita Ashrama'' ಹೆಸರಿನಲ್ಲಿ), ಇಲೆಕ್ಟ್ರಾನಿಕ್ ವರ್ಗಾವಣೆ ಮೂಲಕ ಕಳುಹಿಸಬಹುದು. (Canara Bank, Kalady IFSC Code CNRB0002921 Account Number 2921101005444.) ದೇಣಿಗೆಯನ್ನು ಕಳುಹಿಸಿದ ಬಳಿಕ ತಮ್ಮ ಹೆಸರು, ಪೂರ್ಣ ವಿಳಾಸ, ಪ್ಯಾನ್ ನಂಬರ್ ಇವನ್ನು kalady@rkmm.org ಈ ವಿಳಾಸಕ್ಕೆ ಇ-ಮೇಲ್ ಮೂಲಕ ಕಳುಹಿಸಿಕೊಡಬೇಕು. ನೀವು ನೀಡುವ ದೇಣಿಗೆಯು ಆದಾಯ ತೆರಿಗೆ ಕಾಯಿದೆಯ u/s 80G ತೆರಿಗೆ ವಿನಾಯಿತಿ ಪಡೆಯಲು ಅರ್ಹ ವಾಗಿರುತ್ತದೆ. ರೂ.25,000/- ಕ್ಕೂ ಹೆಚ್ಚಿನ ಮೊತ್ತವನ್ನು ದತ್ತಿಯನ್ನಾಗಿ ಪರಿಗಣಿಸಿ ಸ್ವೀಕರಿಸಲಾಗುವುದು.

ಭಗವಾನ್ ಶ್ರೀರಾಮಕೃಷ್ಣರು ನಿಮ್ಮ ಎಲ್ಲ ಕಾರ್ಯಚಟುವಟಿಕೆಗಳಲ್ಲಿ ತಮ್ಮ ಕೃಪೆಯನ್ನು ಹರಿಸಲಿ ಎಂಬುದೇ ನಮ್ಮ ಹೃತ್ಪೂರ್ವಕ ಪ್ರಾರ್ಥನೆ.

ಭಗವತ್ಸೇವೆಯಲ್ಲಿ ತಮ್ಮ,
ಸ್ವಾಮಿ ಶ್ರೀವಿದ್ಯಾನಂದ
ಅಧ್ಯಕ್ಷರು

# ಸೇವೆ ಮತ್ತು ಆಧ್ಯಾತ್ಮಿಕತೆ



ಸಾಕಷ್ಟು ಅಪಮೌಲ್ಯ, ಅಪಾರ್ಥಕ್ಕೆ ಒಳಗಾದ ಶಬ್ದಗಳಲ್ಲೊಂದು 'ಸೇವೆ'. ಸಂಪೂರ್ಣವಾಗಿ ವಾಣಿಜ್ಯ, ವ್ಯವಹಾರಗಳಲ್ಲೇ ಮುಳುಗಿರುವ ಸಂಸ್ಥೆಗಳು ಇಷ್ಟು ವರ್ಷಗಳಿಂದ 'ಸೇವೆ' ಸಲ್ಲಿಸುತ್ತಿವೆ; ಸರ್ಕಾರಿ ನೌಕರರೂ 'ಸೇವೆ' ಸಲ್ಲಿಸುತ್ತಾರೆ. ಸ್ವಾರ್ಥ, ಡಾಂಭಿಕತನ, ಸುಳ್ಳುಗಳನ್ನೇ ಬಂಡವಾಳ ಮಾಡಿಕೊಂಡಿರುವ ಹಲವು ಮಂದಿ ರಾಜಕಾರಣಿಗಳೂ 'ಸೇವೆ' ಸಲ್ಲಿಸುವವರು. 'ಸೇವೆ' ಎಂದರೆ ಏನೆಂದೇ ಜನರಿಗೆ ಅರ್ಥವಾಗದ ಪರಿಸ್ಥಿತಿ ಇಂದಿನದು. ಸಮಾಜದಲ್ಲಿ 'ಅವನು ಸೇವೆ ಸಲ್ಲಿಸುತ್ತಿದ್ದಾನೆ' ಎಂದರೆ 'ಯಾವ ರೀತಿಯ ಸೇವೆ' ಎಂದು ಕೇಳುತ್ತಾರೆ. ಅಂದರೆ, 'ಯಾವ ಬಗೆಯ ನೌಕರಿ?' ಎಂದರ್ಥ. ಈ ಎಲ್ಲ ಬಳಕೆಯ ಮಾತುಗಳನ್ನು ಬಿಟ್ಟು, ನಿಜವಾದ ಸೇವೆ ಎಂದರೇನು, ಅದರ ಅಗತ್ಯ ಎಷ್ಟರಮಟ್ಟಿಗಿದೆ — ಈ ಅಂಶಗಳನ್ನು ಈಗ ವಿಚಾರ ಮಾಡೋಣ.

### ಸೇವಾ ಮನೋಭಾವದ ಮೂಲ

ಇತರರಿಗೆ ಸಹಾಯ ಮಾಡುವುದು, ಸಮಾಜದಲ್ಲಿ ಜನರಿಗಾಗಿ ಏನಾದರೂ ನೆರವಾಗುವ ಕಾರ್ಯವನ್ನು ಮಾಡುವುದು ಮಾನವ ಜೀವನದಲ್ಲಿ ಎಂದಿನಿಂದಲೂ ಇದ್ದಂತಹ ಒಂದು ಪದ್ಧತಿ. ಪ್ರಾಚೀನಕಾಲದಲ್ಲಿ ರಾಜಂದಿರು, ಧಾರ್ಮಿಕ ವ್ಯಕ್ತಿಗಳು ಅಥವಾ ಕೆಲವು ಮಂದಿ ಶ್ರೀಮಂತರು ಈ ರೀತಿಯ ಸೇವಾ ಕಾರ್ಯಗಳಲ್ಲಿ ತೊಡಗಿದ ಸಂಗತಿ ಚರಿತ್ರೆಯಿಂದ ತಿಳಿದು ಬರುತ್ತದೆ. ಜನರ ಹಿತದಿಂದಲೇ ತನ್ನ ರಾಜ್ಯ ಸುಭದ್ರವೂ, ಸುಭಿಕ್ಷವೂ ಆಗಿರುತ್ತದೆ ಎಂದು ರಾಜಂದಿರ ಮನೋಭಾವವಿದ್ದಿರಬಹುದು; ಅಥವಾ ಜನರನ್ನು ಶಾಂತಿ, ನೆಮ್ಮದಿಯಿಂದ ಇರುವಂತೆ ನೋಡಿಕೊಳ್ಳುವುದೇ ರಾಜನ ಕರ್ತವ್ಯವೆಂಬ ಪ್ರಜ್ಞೆಯೂ ಇದ್ದಿರಬಹುದು. ಇದಕ್ಕೆ ವಿರುದ್ಧವಾಗಿ ಲೋಕಕಂಟಕರೂ, ಸ್ವಾರ್ಥಿಗಳೂ, ಪ್ರಜಾಪೀಡಕರೂ ಆಗಿದ್ದ ಅನೇಕ ಮಂದಿ ರಾಜಂದಿರ ಕಥೆಗಳನ್ನೂ ಕೇಳುತ್ತೇವೆ. ನಮ್ಮ ಪರಂಪರೆಯಲ್ಲಿ ರಾಜಂದಿರ ನೀತಿ, ಆದರ್ಶ ಯಾವುದೆಂದರೆ 'ಪ್ರಜೆಗಳನ್ನು ಮಕ್ಕಳ ಹಾಗೆ ನೋಡಿಕೊಳ್ಳುವುದು.' ಆದರೆ ಇದು 'ಸೇವೆ'ಯಲ್ಲ. ಅವನ ಕರ್ತವ್ಯವೇ ಇದು. ಹೀಗೆ ಮಾಡದಿದ್ದರೆ ಅವನು ಅಪರಾಧಿ. ಕರ್ತವ್ಯಲೋಪ ಮಾಡಿದಂತಾಗುತ್ತದೆ. ಬೇರೆ ಯಾವ ಕಾರಣವೂ ಇಲ್ಲದೆ, ಕೇವಲ ಇತರರ ಬಗ್ಗೆ ದಯೆ, ಅನುಕಂಪ, ಪ್ರೀತಿ ಇವುಗಳನ್ನು ಹೊಂದಿ ಅವರಿಗೆ ಒಳಿತನ್ನು ಮಾಡುವುದನ್ನು ನಿಜವಾದ ಸೇವೆಯೆನ್ನಬೇಕು. ಹಲವು ಸಂದರ್ಭಗಳಲ್ಲಿ ಯಾವುದೇ ಒಬ್ಬ ವ್ಯಕ್ತಿ — ಅವನು ರಾಜನಿರಲಿ, ಉದ್ಯಮಿಯಿರಲಿ, ಜನಸಾಮಾನ್ಯನಿರಲಿ — ಇತರರನ್ನು ನೋಡಿ ಅವರಿಗೆ ಸಹಾಯ ಮಾಡುವುದಕ್ಕೆ ಮುಂದಾಗುವುದನ್ನು ನೋಡುತ್ತೇವೆ; ಅವನಿಗೆ ಬೇರಾವ ಸ್ವಾರ್ಥದ ಉದ್ದೇಶವೂ ಇರುವುದಿಲ್ಲ. ಹೆಸರು, ಕೀರ್ತಿಗಳೂ ಅವನಿಗೆ ಬೇಕಾಗುವುದಿಲ್ಲ. ಹಲವು ಬಾರಿ ಅಂಥವರು ಗುಪ್ತವಾಗಿ ನಿಂತು, ಸಹಾಯ ಮಾಡಿ ಮರೆಯಾಗುತ್ತಾರೆ. ಇಂಥ ಸೇವೆಯೇ ನಿಜವಾದ ಸೇವೆ. ಬೇರಾವ ಸ್ವಾರ್ಥವೂ ಇಲ್ಲದೆ, 'ಇತರರು ಚೆನ್ನಾಗಿರಲಿ' ಎಂಬ ಕಾರಣದಿಂದ ಮಾತ್ರ ಒಳಿತನ್ನು ಮಾಡುವ ಕೆಲವು ಮಂದಿ ಎಲ್ಲ ಕಾಲದಲ್ಲೂ ಇದ್ದರು. ಈ ಬಗೆಯ ಬಯಕೆ, ಮನೋಭಾವ ಮಾನವಹೃದಯದ ಮಿಡಿತ; ಸೇವಾ ಮನೋಭಾವದ ಮೂಲ ಪ್ರವೃತ್ತಿ. ತನ್ನ ಹಾಗೆ ಇತರರೂ ಇರಲಿ; ಹಲವು ಬಾರಿ, ತಾನು ದುಃಖವನ್ನು ಅನುಭವಿಸಿದರೂ ಸರಿ, ಇತರರಿಗೆ ನೆಮ್ಮದಿಯುಂಟಾಗಲಿ ಎಂಬ ಭಾವನೆಯಿದು.

### ವಿವಿಧ ಧರ್ಮಗಳಲ್ಲಿ ಸೇವಾ ಮನೋಭಾವ

ಭಗವಂತನ ಅಸ್ತಿತ್ವವನ್ನು ಪ್ರಧಾನ ಕೇಂದ್ರವಾಗಿಟ್ಟುಕೊಂಡು, ಅನಾದಿಕಾಲದಿಂದ ಮನುಷ್ಯನ ಜೀವನವನ್ನು ಪ್ರಭಾವಿಸಿರುವ ಹಲವು ಧರ್ಮಗಳು ಒಂದಲ್ಲ ಒಂದು ರೀತಿಯಲ್ಲಿ ಸೇವೆಯ ಆದರ್ಶವನ್ನು ಮೈಗೂಡಿಸಿಕೊಂಡಿವೆ.

ಹಿಂದೂಧರ್ಮದ ಮೂಲಗ್ರಂಥವಾದ ವೇದಗಳಲ್ಲಿ ಸರ್ವರಿಗೂ ಶಾಂತಿ, ಆನಂದ, ಸುಖ, ನೆಮ್ಮದಿಗಳನ್ನು ಬಯಸುವ ಹಲವಾರು ಮಂತ್ರಗಳು ಕಂಡುಬರುತ್ತವೆ. ಅಂತೆಯೇ ಆತ್ಮವು ಎಲ್ಲ ಜೀವಿಗಳ ಅಂತರಂಗದಲ್ಲಿರುವ ಚೈತನ್ಯವೆಂಬ ತತ್ತ್ವವು ಉಪನಿಷತ್ತುಗಳ ತಿರುಳಾಗಿದೆ. ವೇದ-ವೇದಾಂತಗಳ ಸಾರವಾಗಿರುವ ಭಗವದ್ಗೀತೆಯಲ್ಲಿ ಈ ಎರಡೂ ಭಾವಗಳು ಸಮನ್ವಯ ಹೊಂದಿ, ಭಾರತೀಯ ಆಧ್ಯಾತ್ಮಿಕ ಆದರ್ಶವನ್ನು ಅದು ಅದ್ಭುತವಾಗಿ ವ್ಯಕ್ತಪಡಿಸುತ್ತದೆ. ಅಲ್ಲಿನ ಕರ್ಮಯೋಗ ಅಥವಾ ನಿಷ್ಕಾಮ ಕರ್ಮ ಭಾವವು ಎಲ್ಲ ಬಗೆಯ ಸೇವಾಮನೋಭಾವಗಳಿಗೆ

ಆಧಾರವಾಗಿ ನಿಂತಿದೆ. '**ಸರ್ವಭೂತಹಿತೇ ರತಾಃ**' *(ಗೀತೆ, ೧೨.೪)* — ಎಂದರೆ ಎಲ್ಲ ಪ್ರಾಣಿಗಳ ಹಿತದಲ್ಲಿ ನಿರತನಾಗಿರುವವನು ನನ್ನನ್ನೇ ಹೊಂದುತ್ತಾನೆ ಎಂದು ಶ್ರೀಕೃಷ್ಣನು ಗೀತೆಯಲ್ಲಿ ಸ್ಪಷ್ಟವಾಗಿ ಹೇಳಿದ್ದಾನೆ.

ಬೌದ್ಧಧರ್ಮದ ಮೂಲಪುರುಷ ಬುದ್ಧನು ದಯೆ, ಅನುಕಂಪಗಳೇ ಮೈವೆತ್ತಂತೆ ಇದ್ದವನು. ಸಹಜವಾಗಿ ಅವನ ಅನುಯಾಯಿಗಳಲ್ಲೂ, ಅವನು ಸ್ಥಾಪಿಸಿದ ಸಂಘದಲ್ಲೂ ಸೇವಾಕಾರ್ಯ ಮೈಗೂಡಿಬಂತು. ಶಿಕ್ಷಣವೇ ಮುಂತಾದ ಕಾರ್ಯಗಳ ಮೂಲಕ ಸಮಾಜದಲ್ಲಿ ಸೇವಾಮನೋಭಾವವನ್ನು ಅವರು ಪಸರಿಸಿದರು. ಇನ್ನು ಜೈನಧರ್ಮದಲ್ಲಂತೂ 'ಅಹಿಂಸಾ ಪರಮೋ ಧರ್ಮ' ಎಂಬುದೇ ಚರಮಧ್ಯೇಯ; ಅದಕ್ಕನುಗುಣವಾಗಿ ಎಲ್ಲ ಪ್ರಾಣಿಗಳಲ್ಲಿ ದಯೆ, ಅನುಕಂಪೆ ಹೊಂದಿ ಅವುಗಳ ಹಿತವನ್ನು ಬಯಸುವುದೇ ಆದರ್ಶ. ಜೈನ ರಾಜರುಗಳು, ಮಂತ್ರಿಗಳು ಹಾಗೂ ಇತರರು ಅನೇಕ ಸೇವಾಕಾರ್ಯಗಳಲ್ಲಿ ನಿರತರಾಗಿದ್ದದನ್ನು ಇತಿಹಾಸ ತಿಳಿಸುತ್ತದೆ.

ಒಂದೇ ಮೂಲದಿಂದ ಜನಿಸಿದ ಧರ್ಮಗಳಾದ ಕ್ರೈಸ್ತ, ಯೆಹೂದಿ ಹಾಗೂ ಇಸ್ಲಾಂ ಧರ್ಮಗಳಲ್ಲೂ ಸೇವಾಧರ್ಮ ಪ್ರಧಾನವಾಗಿ ಕಂಡುಬರುತ್ತದೆ. ಕ್ರೈಸ್ತ ಮಿಶನರಿಗಳಲ್ಲಿ ವೈದ್ಯಕೀಯ, ಶಿಕ್ಷಣ ಕ್ಷೇತ್ರಗಳಲ್ಲಿ ಹಲವು ಸೇವಾಕಾರ್ಯಗಳು ನಡೆಯುತ್ತಿವೆ. ಧರ್ಮಪ್ರಚಾರದೊಂದಿಗೆ ಜನಸೇವೆಯ ಆದರ್ಶವನ್ನೂ ಮೈಗೂಡಿಸಿಕೊಂಡು ನಿಸ್ವಾರ್ಥ ಬದುಕನ್ನು ನಡೆಸುವ ಧರ್ಮಗುರುಗಳಿಗೆ ಅಲ್ಲಿ ಉನ್ನತ ಸ್ಥಾನವನ್ನು ನೀಡಲಾಗಿದೆ.

### ಸೇವಾಮನೋಭಾವ ಮತ್ತು ಅಹಂಕಾರ

ಜನರು ಇತರರಿಗೆ ಸಹಾಯ ಮಾಡುವುದು, ಸೇವಾಕಾರ್ಯಗಳನ್ನು ನಡೆಸುವುದು ಯಾವ ಉದ್ದೇಶದಿಂದ? ಕೆಲವೇ ಕೆಲವು ವ್ಯಕ್ತಿ ಅಥವಾ ಸಂಘ, ಸಂಸ್ಥೆಗಳನ್ನು ಬಿಟ್ಟರೆ ಬಹುತೇಕ ಎಲ್ಲರೂ ಸೇವೆ ಮಾಡುವುದು ತಮ್ಮ ಸ್ವಾರ್ಥವನ್ನು ಪೂರೈಸಿಕೊಳ್ಳಲು ಎಂಬುದೇ ಅತ್ಯಂತ ದುರದೃಷ್ಟಕರ ಸಂಗತಿ. ಸೇವೆ ಮಾಡುವುದರಿಂದ ಪುಣ್ಯ ಸಿಗುತ್ತದೆ; ಕೀರ್ತಿ ಬರುತ್ತದೆ; ಪ್ರಭಾವಶಾಲಿ ವ್ಯಕ್ತಿಗಳ ಗಮನ ಸೆಳೆದು ತಮ್ಮ ಕಾರ್ಯ ಸಾಧಿಸಲು ಅನುಕೂಲವಾಗುತ್ತದೆ — ಹೀಗೆ ಏನೇನೂ ಲೆಕ್ಕಾಚಾರಗಳಿರುತ್ತವೆ. ಇತರರಿಗೆ ಸಹಾಯ ಮಾಡಿದ ಬಳಿಕ, 'ನನ್ನ ಸಹಕಾರದಿಂದ ಅವರು ಬದುಕುವಂತಾಯಿತು. ಇಲ್ಲದಿದ್ದರೆ ಅವರ ಗತಿಯೇನು!' ಎಂದು ಜಂಭದಿಂದ ಎಲ್ಲೆಡೆ ಸಾರುತ್ತ ಹೋಗುತ್ತಾರೆ. ಇದು ಸರಿಯಾದ ಸೇವಾಮನೋಭಾವವಲ್ಲ. ಸ್ವಾರ್ಥ, ಅಹಂಕಾರ, ದರ್ಪಗಳಿಂದ ಕೂಡಿದ ಸೇವೆ ಕಲುಷಿತವಾದುದು, ಅಂಥ ಸೇವೆಯಿಂದ ಹೃದಯಶುದ್ಧಿಯುಂಟಾಗದು. ಗೀತೆಯಲ್ಲಿ ಹೇಳುವ 'ನಿಷ್ಕಾಮಕರ್ಮ' ಅಥವಾ ಫಲಾಪೇಕ್ಷೆಯಿಲ್ಲದೆ ಕರ್ಮವನ್ನು ಮಾಡುವುದು ಮಾತ್ರವೇ ನಿಜವಾದ ಸೇವೆ. ತನಗೆ ಯಾವುದೇ ಲಾಭವಿಲ್ಲದಿದ್ದರೂ ಹೆಸರು ಕೀರ್ತಿಗಳ ಬಯಕೆ ಇಲ್ಲದಿದ್ದರೂ, ಇತರರಿಗೆ ಸಹಾಯ ಮಾಡುವುದೇ ನಿಜವಾದ ಸೇವೆ. ಇತರರು ಸುಖವಾಗಿರಲಿ, ಸಂತೋಷವಾಗಿರಲಿ; ಅವರ ಸುಖದಿಂದಲೇ ತನ್ನ ಸುಖ — ಈ ಭಾವನೆ ಅತ್ಯಂತ ಪವಿತ್ರವಾದುದು.

### ಶ್ರೀರಾಮಕೃಷ್ಣರು ತೋರಿಸಿಕೊಟ್ಟ ಹೊಸ ಆದರ್ಶ

ವೈಷ್ಣವ ಸಂಪ್ರದಾಯಗಳಲ್ಲಿ '**ನಾಮೇ ರುಚಿ, ಜೀವೇ ದಯಾ, ವೈಷ್ಣವ ಸೇವಾ**' (ಭಗವಂತನ ನಾಮ ಜಪದಲ್ಲಿ ಆಸಕ್ತಿ, ಜೀವಿಗಳಲ್ಲಿ ದಯೆ ಹಾಗೂ ಭಗವಂತನ ಭಕ್ತರನ್ನು ಪೂಜಿಸುವುದು) ಎಂಬ ಆದರ್ಶವಿದೆ. ಇದರಲ್ಲಿ ಜೀವಿಗಳ ಮೇಲೆ ದಯೆಯನ್ನು ಹೊಂದಿರುವುದು ಎಂಬ ವಿಚಾರವಾಗಿ ಚರ್ಚೆ ನಡೆದಾಗ ಶ್ರೀರಾಮಕೃಷ್ಣರು ಸಮಾಧಿಸ್ಥರಾಗಿ ಹೇಳಿದರು, ''ಜೀವಿಗಳ ಮೇಲೆ ದಯೆ ತೋರಿಸುವುದೆ? ಜೀವಿಗಳ ಮೇಲೆ ದಯೆ ತೋರಿಸುವೆಯಾ? ದಯೆ ತೋರಿಸುವುದಕ್ಕೆ ನೀನಾರು? ಇಲ್ಲ ಇಲ್ಲ, ಜೀವಿಗಳ ಮೇಲೆ ದಯೆ ಅಲ್ಲ — ಶಿವಜ್ಞಾನದಲ್ಲಿ ಜೀವಸೇವೆ!''

ಶ್ರೀರಾಮಕೃಷ್ಣರ ಈ ಮಾತಿನಲ್ಲಿ ಹೊಸ ಬೆಳಕನ್ನು ಕಂಡು, ಅದನ್ನು ಇತರರಿಗೆ ವಿವರಿಸಿ ಹೇಳಿದವರು ಸ್ವಾಮಿ ವಿವೇಕಾನಂದರು. 'ಜೀವಿಗಳ ಮೇಲೆ ದಯೆ ತೋರಿಸುವುದು' ಎಂದಾಗ, 'ತಾನು ಸುಸ್ಥಿತಿಯಲ್ಲಿರುವೆ, ನೀನು ಹೀನ ಸ್ಥಿತಿಯಲ್ಲಿರುವೆ; ನನ್ನ ದಯೆಯಿಂದ ನೀನು ಬದುಕುತ್ತಿರುವೆ' ಎಂಬ ಅಹಂಕಾರ ಭಾವ ಅಲ್ಲಿರುತ್ತದೆ. ಅದು ನಿಜವಾದ ಭಕ್ತನ ಸ್ವಭಾವವಾಗಲಾರದು. ಎಲ್ಲ ಜೀವಿಗಳಲ್ಲೂ ಭಗವಂತನ ಅಸ್ತಿತ್ವವನ್ನೂ ಕಾಣುವ ಭಕ್ತನು ಇತರರಿಗೆ ಸಹಾಯ ಮಾಡುವುದಲ್ಲ, ದಯೆ ತೋರಿಸುವುದಲ್ಲ; ಅವರಿಗೆ ಸೇವೆಯನ್ನಷ್ಟೇ ಮಾಡಲು ಸಾಧ್ಯ. ಈ ಮನೋಭಾವವನ್ನು ಸಮಾಧಿಯ ಉನ್ನತ ಸ್ಥಿತಿಯಲ್ಲಿದ್ದ ಶ್ರೀರಾಮಕೃಷ್ಣರು ಭಗವಂತನ ದಿವ್ಯವಾಣಿಯೋ ಎಂಬಂತೆ ಉಚ್ಚರಿಸಿದ್ದರು. ಸ್ವಾಮೀಜಿ ಅವರ ಮಾತಿನಲ್ಲಿಯೇ ಈ ವಿಚಾರವನ್ನು ಕೇಳೋಣ:

''ಇಂದು ಶ್ರೀರಾಮಕೃಷ್ಣರ ಮಾತಿನಲ್ಲಿ ಎಂಥ ಅದ್ಭುತ ಬೆಳಕನ್ನು ಕಂಡೆ! ಶುಷ್ಕ, ಕಠೋರ, ನಿಷ್ಪ್ರೇಮವೆಂದು ಪ್ರಸಿದ್ಧವಾಗಿರುವ ವೇದಾಂತ ಜ್ಞಾನವನ್ನು ಭಕ್ತಿಯೊಡನೆ ಒಂದುಗೂಡಿಸಿ ಎಂಥ ಸರಳವೂ ಮಧುರವೂ ಆದ ವ್ಯಾಖ್ಯಾನವನ್ನು ನೀಡಿದರು! ಅದ್ವೈತ ಜ್ಞಾನವನ್ನು ಪಡೆದರೆ ಸಂಸಾರ ಮತ್ತು ಪ್ರಪಂಚದ ಸಂಗವನ್ನು ತ್ಯಜಿಸಿ ಕಾಡಿಗೆ ಹೋಗಬೇಕು ಮತ್ತು ಭಕ್ತಿ, ಪ್ರೀತಿ ಮುಂತಾದ ಕೋಮಲ ಭಾವಗಳನ್ನು ಹೃದಯದಿಂದ ಸಂಪೂರ್ಣ ಕಿತ್ತೆಸೆಯಬೇಕು — ಈ ಮಾತನ್ನು ಇಷ್ಟು ಕಾಲವೂ ಕೇಳುತ್ತಾ ಬಂದಿದ್ದೇನೆ. ಇದರ ಪರಿಣಾಮವಾಗಿ ಜಗತ್ತು ಮತ್ತು ಅದರಲ್ಲಿರುವ ಪ್ರತಿಯೊಬ್ಬ ವ್ಯಕ್ತಿಗಳನ್ನೂ ಧರ್ಮಮಾರ್ಗಕ್ಕಿರುವ ಅಡಚಣೆಗಳೆಂದು ಪರಿಗಣಿಸಿ ಅವರ ಬಗ್ಗೆ ತಿರಸ್ಕಾರ ಭಾವನೆ ಉಂಟಾಗಿ, ಅದೇ ಸಾಧಕನಿಗೆ ಹಾನಿಯನ್ನುಂಟುಮಾಡುತ್ತದೆ. ಇಂದು ಶ್ರೀರಾಮಕೃಷ್ಣರ ಮಾತಿನಿಂದ ತಿಳಿದು ಬರುವುದೇನೆಂದರೆ ವನದ ವೇದಾಂತವನ್ನು ಮನೆಗೆ ತರಬೇಕು. ಸಂಸಾರದ ಪ್ರತಿಯೊಂದು ಕೆಲಸದಲ್ಲಿಯೂ ಅದನ್ನು ಅವಲಂಬಿಸುವಂತೆ ಮಾಡಬೇಕು. ಮಾನವನು ಏನೇನು ಮಾಡುತ್ತಿರುವನೋ ಅದನ್ನೇ ತಾನು ಮಾಡಲಿ, ಅದರಲ್ಲಿ ಹಾನಿಯಿಲ್ಲ. ಆದರೆ ಅವನು ತನ್ನ ಹೃದಯಾಂತರಾಳದಲ್ಲಿ ಈ ವಿಶ್ವಾಸವನ್ನು ಇಟ್ಟುಕೊಂಡಿರಬೇಕು: ಈಶ್ವರನೇ

ಜೀವ, ಜಗತ್ತಿನ ರೂಪದಲ್ಲಿ ತನ್ನ ಮುಂದೆ ಪ್ರಕಾಶಿಸುತ್ತಿರುವನು, ಜೀವನದ ಪ್ರತಿ ಮುಹೂರ್ತದಲ್ಲಿಯೂ ಅವನು ಯಾರನ್ನು ಸಂಪರ್ಕಿಸುತ್ತಾನೊ, ಯಾರನ್ನು ಪ್ರೀತಿಸುತ್ತಾನೊ, ಯಾರಿಗೆ ಶ್ರದ್ಧೆ, ದಯೆ, ಗೌರವ ತೋರಿಸುತ್ತಾನೊ, ಅವರೆಲ್ಲರೂ ಭಗವಂತನ ಅಂಶ. ಪ್ರಪಂಚದಲ್ಲಿರುವ ಎಲ್ಲಾ ವ್ಯಕ್ತಿಗಳನ್ನೂ ಈ ರೀತಿ ಶಿವಜ್ಞಾನದಿಂದ ನೋಡಲು ಸಾಧ್ಯವಾದರೆ ತನ್ನನ್ನು ಒಬ್ಬ ದೊಡ್ಡ ವ್ಯಕ್ತಿಯೆಂದು ಪರಿಗಣಿಸುತ್ತಾ ಅವರ ವಿಷಯದಲ್ಲಿ ರಾಗ, ದ್ವೇಷ, ಜಂಭ ಅಥವಾ ದಯೆ ಇವುಗಳನ್ನು ವ್ಯಕ್ತಪಡಿಸಲು ಅವಕಾಶವೆಲ್ಲಿ? ಈ ರೀತಿ ಶಿವಜ್ಞಾನದಿಂದ ಜೀವಿಗಳ ಸೇವೆ ಮಾಡುತ್ತಾ ಚಿತ್ತಶುದ್ಧಿ ಉಂಟಾಗುತ್ತದೆ. ಸ್ವಲ್ಪಕಾಲದಲ್ಲಿಯೇ ತನ್ನನ್ನು ಚಿದಾನಂದಮಯ ಭಗವಂತನ ಅಂಶ, ಶುದ್ಧ, ಬುದ್ಧ ಮುಕ್ತಸ್ವಭಾವದವನು ಎಂದು ಅರಿಯಲು ಸಾಧ್ಯವಾಗುತ್ತದೆ.

"ಶ್ರೀರಾಮಕೃಷ್ಣರ ಈ ಮಾತಿನಿಂದ ಭಕ್ತಿಮಾರ್ಗದಲ್ಲಿಯೂ ವಿಶೇಷ ಬೆಳಕನ್ನು ಕಂಡಂತಾಯಿತು. ಸರ್ವಭೂತಗಳಲ್ಲಿಯೂ ಭಗವಂತನನ್ನು ಎಲ್ಲಿಯವರೆಗೆ ಕಾಣಲಾಗುವುದಿಲ್ಲವೋ ಅಲ್ಲಿಯವರೆಗೆ ಯಥಾರ್ಥಭಕ್ತಿ ಅಥವಾ ಪರಾಭಕ್ತಿಯನ್ನು ಪಡೆಯುವುದು ಸಾಧಕನಿಗೆ ಬಹುದೂರದ ಮಾತು. ಶಿವ ಅಥವಾ ನಾರಾಯಣ ಬುದ್ಧಿಯಿಂದ ಜೀವಿಗಳ ಸೇವೆ ಮಾಡಿದರೆ ಎಲ್ಲರ ಒಳಗೂ ಭಗವಂತನನ್ನು ಕಾಣುವುದರ ಮೂಲಕ ಸಾಧಕನು ಯಥಾರ್ಥ ಭಕ್ತಿಯನ್ನು ಪಡೆದು ಸ್ವಲ್ಪ ಕಾಲದಲ್ಲಿಯೇ ಕೃತಾರ್ಥನಾಗುತ್ತಾನೆ. ಕರ್ಮ ಅಥವಾ ರಾಜಯೋಗವನ್ನು ಯಾರು ಅನುಸರಿಸುತ್ತಿರುವರೋ ಆ ಸಾಧಕರೂ ಕೂಡ ಈ ಮಾತಿನಲ್ಲಿ ವಿಶೇಷ ಬೆಳಕನ್ನು ಪಡೆಯುತ್ತಾರೆ. ಏಕೆಂದರೆ ದೇಹಧಾರಿಯಾದವನು ಕರ್ಮ ಮಾಡದೆ ಒಂದು ಕ್ಷಣವೂ ಇರಲಾರ. ಹಾಗಿರುವಾಗ ಶಿವಜ್ಞಾನದಲ್ಲಿ ಜೀವಸೇವೆಯ ರೂಪದ ಕರ್ಮಾನುಷ್ಠಾನ ಮಾಡುವುದು ಕರ್ತವ್ಯ ಮತ್ತು ಅವನು ಹೀಗೆ ಮಾಡುವುದರಿಂದಲೇ ಬೇಗನೆ ಗುರಿಯನ್ನು ಮುಟ್ಟುತ್ತಾನೆ. ಏನೇ ಆಗಲಿ, ಭಗವಂತನು ನನಗೆ ಅವಕಾಶ ಕೊಟ್ಟದ್ದೇ ಆದರೆ ಇಂದು ನಾನು ಏನು ಕೇಳಿದೆನೋ ಈ ಅದ್ಭುತ ಸತ್ಯವನ್ನು ಪ್ರಪಂಚದ ಎಲ್ಲೆಡೆ ಪ್ರಚಾರ ಮಾಡುತ್ತೇನೆ. ಪಂಡಿತ, ಮೂರ್ಖ, ಶ್ರೀಮಂತ, ದರಿದ್ರ, ಬ್ರಾಹ್ಮಣ, ಚಂಡಾಲ ಎಲ್ಲರೂ ಇದನ್ನು ಕೇಳಿ ಮುಗ್ಧರಾಗುವಂತೆ ಮಾಡುತ್ತೇನೆ." *(ಶ್ರೀರಾಮಕೃಷ್ಣ ಲೀಲಾಪ್ರಸಂಗ, ಭಾಗ ೨, ಪು. ೩೬೦-೬೧)*

## ಸೇವಾಕಾರ್ಯಗಳಿಗೆ ಸ್ವಾಮೀಜಿ ಕೊಟ್ಟ ರೂಪುರೇಷೆ

ಶ್ರೀರಾಮಕೃಷ್ಣರ ಅತ್ಯಂತ ಗಾಢ ಆಧ್ಯಾತ್ಮಿಕ ಅನುಭವದ ಹಿನ್ನೆಲೆಯಿಂದ ಈ ದಿವ್ಯ ಆದರ್ಶವನ್ನು ಕರ್ಮಯೋಗ, ತ್ಯಾಗ-ಸೇವೆ ಎಂಬ ಧ್ಯೇಯಗಳ ಮೂಲಕ ಜಗತ್ತಿಗೆ ಸಾರಿ, ಹೊಸ ಆಧ್ಯಾತ್ಮಿಕ ಮಾರ್ಗವನ್ನು ತೋರಿಸಿಕೊಟ್ಟರು ಸ್ವಾಮಿ ವಿವೇಕಾನಂದರು. ಆಗಿನ ಭಾರತದ ಪರಿಸ್ಥಿತಿ; ಪರಕೀಯರ ದಾಸ್ಯದಿಂದ ಕಂಗೆಟ್ಟಿದ್ದ ದೇಶದ ಸ್ಥಿತಿಗತಿ ಬಡತನ, ಅನಕ್ಷರತೆ, ಅಜ್ಞಾನ ಮುಂತಾದ ಸಾಮಾಜಿಕ ದುಃಸ್ಥಿತಿ — ಇವುಗಳಿಗೆಲ್ಲ ಈ ಹೊಸ ತ್ಯಾಗ-ಸೇವೆಯ ಆದರ್ಶ ಅತ್ಯಂತ ಸೂಕ್ತವಾದ ಆಧ್ಯಾತ್ಮಿಕ ಮಾರ್ಗವೆನಿಸಿತು. ಈ ಕಾರಣದಿಂದಲೇ ಅವರು ಕರ್ಮಯೋಗದ ಮಹತ್ವವನ್ನು ಎತ್ತಿಹಿಡಿದರು.

ಭಗವದ್ಗೀತೆಯಲ್ಲಿ ಶ್ರೀಕೃಷ್ಣನು ಉಪದೇಶಿಸಿದ್ದ ಕರ್ಮಯೋಗದ ಆದರ್ಶವು ಅತ್ಯಂತ ವಿಶಾಲವೂ ಆಧ್ಯಾತ್ಮಿಕ ಹಾಗೂ ಲೌಕಿಕ ಬದುಕನ್ನು ಒಂದುಗೂಡಿಸುವಂತಹದೂ ಆಗಿತ್ತು . ಆದರೆ ಕಾಲಾಂತರದಲ್ಲಿ ಈ ಆದರ್ಶವನ್ನಿಟ್ಟುಕೊಂಡು ಕರ್ಮಯೋಗದ ಮೂಲಕ ಆಧ್ಯಾತ್ಮಿಕ ಸಾಧನೆ ಮಾಡುವ ಮಾರ್ಗವು ಭಾರತದಲ್ಲಿ ಕಳೆದೇಹೋಗಿತ್ತು ಎನ್ನಬೇಕು. ಗೀತೆಯ ಮೇಲೆ ಬರೆದ ಭಾಷ್ಯಗಳಲ್ಲಿ ಕರ್ಮವೆಂದರೆ ಯಜ್ಞಕ್ರಿಯೆ ಎಂಬ ಅರ್ಥವನ್ನು ನೀಡುವ ಕ್ರಮವನ್ನೂ ಕಾಣುತ್ತೇವೆ. ಈ ಎಲ್ಲ ಕಾರಣಗಳಿಂದ, 'ಕರ್ಮಯೋಗ'ವೆಂದರೆ 'ನಿಸ್ವಾರ್ಥವಾಗಿ ಮಾಡುವ ಸೇವೆ' ಎಂಬ ಅರ್ಥ ನಮ್ಮ ಪರಂಪರೆಯಲ್ಲಿ ಸ್ಪಷ್ಟವಾಗಿ ಮೂಡಿ ಬಂದಿರಲಿಲ್ಲ. ಶ್ರೀರಾಮಕೃಷ್ಣರು ತಮ್ಮ ಆಧ್ಯಾತ್ಮಿಕ ಅನುಭವದ ಆಳದಿಂದ ಈ ಅರ್ಥವನ್ನು ಹೊಸದಾಗಿ ಬೆಳಗಿಸಿದರು; ಸ್ವಾಮೀಜಿ ಅದನ್ನು ಎಲ್ಲರಿಗೂ ಅರ್ಥವಾಗುವಂತೆ ವಿವರಿಸಿ, ಈ ದಿವ್ಯ ಆದರ್ಶವು ಕಾರ್ಯಗತವಾಗುವಂತೆ ಮಾಡಿದರು. ಅವರು ತಮ್ಮ ಸಹೋದರ ಸಂನ್ಯಾಸಿಗಳೊಂದಿಗೆ ಹತ್ತು ಹಲವು ಸೇವಾಕಾರ್ಯಗಳನ್ನು ಆರಂಭಿಸಿದರು. ತಮ್ಮ ಶಿಷ್ಯಂದಿರನ್ನೂ, ಭಾರತದ ಯುವಕ-ಯುವತಿಯರನ್ನೂ ಅನೇಕ ಬಗೆಯ ಸೇವಾಕಾರ್ಯಗಳಲ್ಲಿ ತೊಡಗಿಸಿ, ಈ ಮೂಲಕ ದೇಶದೆಲ್ಲೆಡೆ ನಿಸ್ವಾರ್ಥ ಸೇವೆಯ ಹೊಸ ಅಲೆ ವ್ಯಾಪಿಸುವಂತೆ ಮಾಡಿದರು.

ಸ್ವಾಮಿ ವಿವೇಕಾನಂದರ 'ಕರ್ಮಯೋಗ' ಗ್ರಂಥವು ಭಗವದ್ಗೀತೆಯ ನಂತರ ಕರ್ಮಯೋಗದ ಆದರ್ಶವನ್ನು ಎತ್ತಿಹಿಡಿಯುವ ಗ್ರಂಥವಾಗಿದೆ. ಗೀತೆಯಲ್ಲಿ ಕಂಡುಬರುವ ನಿಷ್ಕಾಮ ಕರ್ಮದ ಆದರ್ಶದೊಂದಿಗೆ ಶ್ರೀರಾಮಕೃಷ್ಣರ ಹಾಗೂ ವೇದಾಂತ ತತ್ತ್ವಗಳ ಆದರ್ಶವನ್ನು ಬೆಸೆದು 'ಕರ್ಮಯೋಗ'ವೆಂಬುದು ಒಂದು ಶ್ರೇಷ್ಠ ಆಧ್ಯಾತ್ಮಿಕ ಸಾಧನೆಯೇ ಆಗಿದೆ ಎಂದು ನಿರೂಪಿಸಿದರು ಸ್ವಾಮಿ ವಿವೇಕಾನಂದರು. ಅವರು ಹಾಕಿಕೊಟ್ಟ ಈ ರೂಪರೇಷೆಯನ್ನು ಆಧರಿಸಿ ಇಂದು ಭಾರತ ಹಾಗೂ ಇತರ ದೇಶಗಳಲ್ಲಿನ ಹತ್ತು ಹಲವು ಸಂಘಸಂಸ್ಥೆಗಳು ಹಾಗೂ ಅನೇಕ ವ್ಯಕ್ತಿಗಳು ಬಗೆಬಗೆಯ ಸೇವಾಕಾರ್ಯಗಳಲ್ಲಿ ತೊಡಗಿಕೊಂಡಿದ್ದಾರೆ. ಜಗತ್ತಿಗೆ ನಿಸ್ವಾರ್ಥಸೇವೆಯ ಆಧ್ಯಾತ್ಮಿಕ ಮೌಲ್ಯವನ್ನು ವಿವರಿಸಿ, ಅದರ ವ್ಯಾಪ್ತಿಯನ್ನು ವಿಸ್ತರಿಸಿ ಉನ್ನತ ನೆಲೆಗೇರಿಸಿದ ಕೀರ್ತಿ ಸ್ವಾಮಿ ವಿವೇಕಾನಂದರದು. ಭಾರತದ ಪ್ರಾಚೀನ ಪರಂಪರೆಯಲ್ಲಿ ಮರೆಯಾಗಿದ್ದ ಶ್ರೇಷ್ಠ ಹಾಗೂ ದಿವ್ಯ ರತ್ನದ ಗಣಿಯನ್ನು ಶೋಧಿಸಿ ತೆಗೆದು, ಹೊಸ ಹೊಳಹನ್ನು ನೀಡಿ, ಪ್ರಪಂಚಕ್ಕೆ ಅಮೃತವನ್ನೇ ಉಣಿಸಿದ ಶ್ರೀರಾಮಕೃಷ್ಣ-ವಿವೇಕಾನಂದರ ಈ ಮಹತ್ಕಾರ್ಯವನ್ನು ಮನುಕುಲವು ಎಂದೆಂದಿಗೂ ಮರೆಯಲಾಗದು. ✸

### ಜೂನ್ ತಿಂಗಳ ಕಾರ್ಯಕ್ರಮಗಳು

| | | |
|---|---|---|
| ೧೩ | ಗುರುವಾರ | ಏಕಾದಶಿ |
| ೨೮ | ಶುಕ್ರವಾರ | ಏಕಾದಶಿ |

# ಧಾರ್ಮಿಕ ಆಚರಣೆಗಳು



❁ ಯಾರಿಗೆ ಭಗವಂತನ ಸಾಕ್ಷಾತ್ಕಾರ ದೊರೆತಿದೆಯೋ ಆತನಿಗೆ ಸಂಧ್ಯಾವಂದನಾದಿ ಕರ್ಮಗಳು ಇರುವುದಿಲ್ಲ. ಆತನ ವಿಷಯದಲ್ಲಿ ಸಂಧ್ಯಾವಂದನೆ ಗಾಯತ್ರಿಯಲ್ಲಿ ಲೀನವಾಗುತ್ತದೆ. ಅದು ಹಾಗಾದಾಗ ಗಾಯತ್ರಿಯನ್ನು ಜಪಿಸಿದರೇ ಬೇಕಾದಷ್ಟು. ಬಳಿಕ ಗಾಯತ್ರಿ ಓಂಕಾರದಲ್ಲಿ ಲಯವಾಗುತ್ತದೆ. ಅದಾದನಂತರ ಗಾಯತ್ರಿಯನ್ನು ಜಪಿಸಬೇಕಾದ ಆವಶ್ಯಕತೆಯೇನಿರುವುದಿಲ್ಲ ; ಆಗ ಕೇವಲ ''ಓಂ'' ಎಂದು ಜಪಿಸುತ್ತಿದ್ದರೇ ಸಾಕು. ಸಂಧ್ಯಾವಂದನಾದಿ ಕರ್ಮಗಳು ಎಲ್ಲಿಯವರೆಗೆ? ಹರಿನಾಮ ಅಥವಾ ರಾಮನಾಮೋಚ್ಚಾರಣೆಯಿಂದ ಪುಲಕವುಂಟಾಗುವುದಿಲ್ಲವೋ, ಪ್ರೇಮಾಶ್ರು ಸುರಿಯುವುದಿಲ್ಲವೋ ಅಲ್ಲಿಯವರೆಗೆ. ಜನ ಹಣಕಾಸುಗಳಿಗಾಗಿ, ವ್ಯಾಜ್ಯ ಗೆಲ್ಲುವುದಕ್ಕಾಗಿ, ಪೂಜಾದಿ ಕರ್ಮಗಳಲ್ಲಿ ತೊಡಗುತ್ತಾರೆ. ಇದು ಒಳ್ಳೆಯದಲ್ಲ.

❁ ಪ್ರತಿಮಾಪೂಜೆ ಮಾಡುವುದರಲ್ಲಿ ತಪ್ಪೇನಿದೆ? 'ಎಲ್ಲಿ ಅಸ್ತಿ, ಭಾತಿ, ಪ್ರಿಯ ಇರುವುವೊ, ಅಲ್ಲೇ ಭಗವಂತನ ವ್ಯಕ್ತತೆಯೂ ಇದೆ ' ಎಂದು ವೇದಾಂತ ಹೇಳುತ್ತದೆ, ಆದ್ದರಿಂದ ಬ್ರಹ್ಮನಿಲ್ಲದ ವಸ್ತುವೇ ಇಲ್ಲ.

ಚಿಕ್ಕ ಹುಡುಗಿಯರು ಎಲ್ಲಿಯವರೆಗೆ ತಮ್ಮ ಗೊಂಬೆಗಳೊಡನೆ ಆಟವಾಡುತ್ತಾರೆ? ವಿವಾಹವಾಗುವವರೆಗೆ ಮತ್ತು ತಮ್ಮ ತಮ್ಮ ಪತಿಯರೊಡನೆ ವಾಸಿಸುವವರೆಗೆ. ವಿವಾಹವಾದ ನಂತರ ಅವರು ಗೊಂಬೆಗಳನ್ನು ಪೆಟ್ಟಿಗೆಯಲ್ಲಿ ಹಾಕಿ ಇಡುತ್ತಾರೆ. ಭಗವಂತನ ಸಾಕ್ಷಾತ್ಕಾರ ದೊರೆತನಂತರ ಪ್ರತಿಮಾಪೂಜೆಯ ಆವಶ್ಯಕತೆ ಎಲ್ಲಿರುತ್ತದೆ?

❁ ಯಾರಿಗೆ ಸಮಯವಿರುವುದೊ, ಅವರು ಧ್ಯಾನ ಭಜನೆ ಮಾಡಲೇಬೇಕು. ಆದರೆ ಯಾರಿಗೆ ಸಮಯವಿಲ್ಲವೊ ಅವರು ದಿನಕ್ಕೆ ಎರಡು ವೇಳೆ ಹೃತ್ಪೂರ್ವಕವಾಗಿ ಭಗವಂತನಿಗೆ ನಮಸ್ಕಾರ ಹಾಕಲಿ. ಆತ ಅಂತರ್ಯಾಮಿ. ಆತನಿಗೆ ಗೊತ್ತಿದೆ. ಇವರು ಇನ್ನೇನು ತಾನೆ ಮಾಡಿಯಾರು, ಇವರಿಗೆ ಬೇಕಾದಷ್ಟು ಕೆಲಸ ಕಾರ್ಯಗಳಿವೆಯಲ್ಲ, ಪಾಪ ಎಂದು. ಆತನನ್ನು ಪ್ರಾರ್ಥಿಸಲು ನಿಮಗೆ ಸಮಯವಿಲ್ಲ; ಆದ್ದರಿಂದ ಆತನಿಗೆ ನಿಮ್ಮ ವಕಾಲತ್ತನ್ನು ವಹಿಸಿಬಿಡಿ. ಆದರೆ ನೋಡಿಕೊಳ್ಳಿ. ಆತನ ಸಾಕ್ಷಾತ್ಕಾರವನ್ನು ಪಡೆದುಕೊಳ್ಳದೆ ಹೋದಿರಿ ಎಂದರೆ, ಆತನ ದರ್ಶನವನ್ನು ಮಾಡಿಕೊಳ್ಳದೆ ಹೋದಿರಿ ಎಂದರೆ, ಜೀವನ ಬರಿದೆ ವ್ಯರ್ಥವಾದಂತೆ.

❁ ಹೆಸರೇನು ಕಡಮೆಯಾದುದೆ? ಭಗವಂತನಿಗೂ ಆತನ ಹೆಸರಿಗೂ ವ್ಯತ್ಯಾಸವೇನಿಲ್ಲ. ಸತ್ಯಭಾಮೆ ಚಿನ್ನ, ರತ್ನ, ಮಾಣಿಕ್ಯ ಇವುಗಳಿಂದ ಶ್ರೀಕೃಷ್ಣನನ್ನು ತುಲಾಯಂತ್ರದಲ್ಲಿ ತೂಗಲು ಪ್ರಯತ್ನಮಾಡಿದಾಗ ಆಕೆ ತಕ್ಕಡಿ ತಟ್ಟೆಗಳನ್ನು ಒಂದು ಸಮತೂಕಕ್ಕೆ ತರಲಾಗಲಿಲ್ಲ. ಆಗ ರುಕ್ಮಿಣಿ ತುಳಸಿ ಎಲೆಯ ಮೇಲೆ ಕೃಷ್ಣನ ಹೆಸರನ್ನು ಬರೆದು ತೂಕದ ತಟ್ಟೆಗೆ ಹಾಕಿದಳು. ಒಡನೆ ತೂಕ ಸರಿಹೋಗಿಬಿಟ್ಟಿತು.

❁ ಮೊದಲು ತಪಸ್ಸು ಮಾಡಬೇಕು. ಆ ಬಳಿಕವೇ ಭಗವಂತನ ಸಾಕ್ಷಾತ್ಕಾರ. ಶಾಸ್ತ್ರಗಳ ಶ್ಲೋಕಗಳನ್ನೆಲ್ಲ ಕಂಠಪಾಠ ಮಾಡಿಕೊಂಡರೂ ಏನೂ ದೊರೆಯದು.

❁ ಮನಸ್ಸೆಂಬುದು ಅಗಸನ ಮನೆಯ ಬಟ್ಟೆಯ ಹಾಗೆ. ಅದನ್ನು ಯಾವ ಬಣ್ಣದಲ್ಲಿ ಅದ್ದುತ್ತೇವೆಯೋ, ಅದಕ್ಕೆ ಆ ಬಣ್ಣ ಬಂದುಬಿಡುತ್ತದೆ... ಮೊದಲು ಚಿತ್ತಶುದ್ಧಿ ಆಗಬೇಕು. ಬಳಿಕ ಅದನ್ನು ಭಗವಂತನ ಕಡೆಗೆ ತಿರುಗಿಸಿದರೆ ಅದಕ್ಕೆ ಭಗವಂತನ ಬಣ್ಣ ಹತ್ತಿಕೊಂಡುಬಿಡುತ್ತದೆ. ಹಾಗೆ ಮಾಡುವುದನ್ನು ಬಿಟ್ಟು ಅದನ್ನು ಸಂಸಾರದ ಕಡೆಗೆ, ನಾಟ್ಯದ ಕಡೆಗೆ ತಿರುಗಿಸಿದರೆ ಅದಕ್ಕೆ ಆ ಬಣ್ಣ ಬಂದುಬಿಡುತ್ತದೆ.

❁ ಭಗವಂತನ ಪೂಜೆ ಮಾಡಬೇಕಾದರೆ ಅದಕ್ಕೆ ಬೇಕಾಗುವ ಸಿದ್ಧತೆಗಳನ್ನು ಮಾಡಿಕೊಳ್ಳಲು ಬಹಳ ಸಮಯ ಹಿಡಿಯುತ್ತದೆ. ಹೂವು ಕೊಯ್ಯುವುದು. ಚಂದನ ಮಾಡಿಕೊಳ್ಳುವುದು. ಪೂಜಾ ಸಾಮಗ್ರಿಗಳನ್ನು ಬೆಳಗಿಕೊಳ್ಳುವುದು, ನೈವೇದ್ಯಕ್ಕೆ ಸಿದ್ಧತೆ ಮಾಡಿಕೊಳ್ಳುವುದು ಇವೇ ಮೊದಲಾದ ಕೆಲಸಗಳನ್ನು ಮಾಡುವಾಗಲೆಲ್ಲಾ ಮನಸ್ಸು ಭಗವಂತನ ಕಡೆಗೇ ಹರಿಯುತ್ತಿರುತ್ತದೆ. ಹೀನ ಬುದ್ಧಿ, ಕೋಪ, ದ್ವೇಷ ಇವೆಲ್ಲಾ ತೊಲಗಿಹೋಗುತ್ತದೆ. ಮಾತಾಡುವಾಗ ಭಗವಂತನ ವಿಷಯವಾಗಿಯೇ ಮಾತುಕತೆಗಳನ್ನಾಡಿ.

❁ ಮುಖ್ಯವಾಗಿ ಮಾಡಬೇಕಾದುದೇನೆಂದರೆ, ಹೇಗಾದರೂ ಮಾಡಿ ಮನಸ್ಸನ್ನು ಭಗವಂತನ ಕಡೆಗೆ ತಿರುಗಿಸಬೇಕು. ಒಮ್ಮೆಯೂ ಆತನನ್ನು ಮರೆಯಕೂಡದು. ಅದು ತೈಲಧಾರೆಯಂತೆ ಅವಿಚ್ಛಿನ್ನವಾಗಿರಬೇಕು. ಒಂದು ಇಟ್ಟಿಗೆಯನ್ನೇ ಆಗಲಿ ಒಂದು ಕಲ್ಲನ್ನೇ ಆಗಲಿ ಅದೇ ಭಗವಂತ ಎಂದು ಭಾವಿಸಿ ಶ್ರದ್ಧಾ ಭಕ್ತಿಯಿಂದ ಪೂಜಿಸುವುದಾದರೆ, ಭಗವಂತನ ಕೃಪೆಯಿಂದ ಅದರಿಂದಲೇ ಆತನ ದರ್ಶನ ದೊರೆತುಬಿಡುವ ಸಂಭವವಿದೆ.

❁ ಜನರಿಗೆ ಅನ್ನದಾನ ಮಾಡಿದರೆ ಒಂದು ರೀತಿಯಲ್ಲಿ ಭಗವಂತನ ಸೇವೆಯನ್ನೇ ಮಾಡಿದಂತಾಗುತ್ತದೆ. ಅಲ್ಲವೆ? ಎಲ್ಲಾ ಜೀವಿಗಳಲ್ಲಿಯೂ ಆತ ಅಗ್ನಿರೂಪದಲ್ಲಿ ಇದ್ದಾನೆ. ಜನರಿಗೆ ಅನ್ನ ಹಾಕುವುದು ಎಂದರೆ, ಅಂತರ್ಯಾಮಿಯಾಗಿರುವ ಆತನಿಗೆ ಅರ್ಪಿಸಿದಂತೆಯೇ.

ಶ್ರೀರಾಮಕೃಷ್ಣ ವಚನವೇದದಿಂದ

# ಶ್ರೀಮಾತೆಯವರ ಸಾನ್ನಿಧ್ಯದಲ್ಲಿ

ಮೂಲ ಬಂಗಾಳಿ : **ಸ್ವಾಮಿ ನಿರ್ವಾಣಾನಂದ** ಅನುವಾದ : **ಸ್ವಾಮಿ ಜ್ಞಾನಯೋಗಾನಂದ**

ಶ್ರೀಮಾತೆಯವರ ಮೇಲೆ ಅಪಾರ ಭಕ್ತಿ , ಗೌರವಗಳನ್ನು ಹೊಂದಿದ್ದ ಅನೇಕ ಮಂದಿ ಸಂನ್ಯಾಸಿ ಶಿಷ್ಯಂದಿರು ಅವರನ್ನು ಕುರಿತು ಬರೆದ ಹಲವು ಸ್ಮೃತಿಲೇಖನಗಳು ಪ್ರಕಟವಾಗಿವೆ. ೧೯೧೨ರ ನವೆಂಬರ್ ತಿಂಗಳ 'ಉದ್ಬೋಧನ'ದಲ್ಲಿ ಪ್ರಕಟವಾದ ಈ ಲೇಖನವು 'ಮಾಯೇರ್ ಪದಪ್ರಾಂತೇ' ಎಂಬ ಬಂಗಾಳಿ ಗ್ರಂಥದಲ್ಲಿ ಅಡಕವಾಗಿದೆ. ಶ್ರೀರಾಮಕೃಷ್ಣರ ಮಾನಸಪುತ್ರರೆಂದೇ ಪ್ರಸಿದ್ಧರಾಗಿದ್ದ ಸ್ವಾಮಿ ಬ್ರಹ್ಮಾನಂದರ ಸೇವಕರಾಗಿ ಅನೇಕ ವರ್ಷಗಳ ಕಾಲ ನಿಯುಕ್ತರಾಗಿದ್ದ ಲೇಖಕರು, ಮುಂದೆ ರಾಮಕೃಷ್ಣ ಮಹಾಸಂಘದ ಉಪಾಧ್ಯಕ್ಷರಾಗಿದ್ದರು. ಆಧ್ಯಾತ್ಮಿಕವಾಗಿ ಅತ್ಯುನ್ನತ ಸ್ಥಿತಿಗೇರಿದ್ದ ಅವರು, ಈ ಸಂಕ್ಷಿಪ್ತ ಲೇಖನದಲ್ಲಿ ಶ್ರೀಮಾತೆಯವರ ಪುಣ್ಯಸ್ಮರಣೆಯನ್ನು ಮಾಡಿದ್ದಾರೆ.

ಶ್ರೀಮಾತೆಯವರನ್ನು ನಾನು ಮೊದಲ ಬಾರಿ ಭೇಟಿಯಾದದ್ದು ಕಾಶಿ ಸೇವಾಶ್ರಮದಲ್ಲಿ. ನನಗೆ ನೆನಪಿರುವಂತೆ ಅದು ಕ್ರಿ.ಶ. ೧೯೧೩ ನೇ ಇಸವಿಯ ನವಂಬರ್ ತಿಂಗಳ ಮೊದಲ ದಿನಗಳಲ್ಲಿ. ಕಾಳೀಪೂಜೆಯ ಮರುದಿನ ಶ್ರೀಮಾತೆ ಸೇವಾಶ್ರಮಕ್ಕೆ ಬಂದಿದ್ದರು.[೧] ನಾನು ರಾಮಕೃಷ್ಣ ಮಹಾಸಂಘವನ್ನು ಸೇರುವ ಉದ್ದೇಶದಿಂದ ಕೆಲವು ದಿನಗಳ ಮೊದಲಷ್ಟೇ ಅಲ್ಲಿಗೆ ಬಂದಿದ್ದೆ. ಅಲ್ಲಿಗೆ ಹೋಗುವ ಮೊದಲೇ ನಾನು 'ಶ್ರೀರಾಮಕೃಷ್ಣ ಕಥಾಮೃತ' (ವಚನವೇದ) ಹಾಗೂ ಇನ್ನಿತರ ಮೂಲಗಳಿಂದ ಶ್ರೀಮಾತೆಯವರ ಬಗ್ಗೆ ತಿಳಿದಿದ್ದೆ. ಮಹಾರಾಜ್ (ಸ್ವಾಮಿ ಬ್ರಹ್ಮಾನಂದರು) ಕೂಡ ಆಗ ಸೇವಾಶ್ರಮದಲ್ಲಿದ್ದರು. ಶ್ರೀಮಾತೆ ಆಗ ಅದ್ವೈತ ಆಶ್ರಮದ ಬಳಿ ಇದ್ದ, ಬಾಗ್‌ಬಜಾರ್ ನಿವಾಸಿಯಾದ ಕಿರಣ ದತ್ತನ 'ಲಕ್ಷ್ಮೀ ನಿವಾಸ' ಎಂಬ ಮನೆಯಲ್ಲಿ ತಂಗಿದ್ದರು. ಶ್ರೀಮಾತೆ ಬಂದ ದಿನವೇ ಸೇವಾಶ್ರಮದ ಚಟುವಟಿಕೆಗಳನ್ನೆಲ್ಲ ನೋಡಿ ಬಂದಿದ್ದರು. ಸೇವಾಶ್ರಮದಲ್ಲಿ ಸಾಧುಗಳು ರೋಗಿಗಳನ್ನು ಭಗವಂತನ ಸ್ವರೂಪವೆಂದೇ ಕಂಡು ಉಪಚರಿಸುತ್ತಿದ್ದುದನ್ನು ಕಂಡು ಶ್ರೀಮಾತೆ ಅತ್ಯಂತ ಆನಂದಗೊಂಡಿದ್ದರು. ಅವರು ಹೀಗೆಂದಿದ್ದರು: ''ಇಲ್ಲಿ ಸ್ವಯಂ ಶ್ರೀರಾಮಕೃಷ್ಣರೇ ರಾರಾಜಿಸುತ್ತಿದ್ದಾರೆ. ನನ್ನ ಮಕ್ಕಳು ಇಲ್ಲಿ ಪ್ರಾಣವನ್ನೇ ಪಣವನ್ನಾಗಿಟ್ಟುಕೊಂಡು ರೋಗಿಗಳ ಸೇವೆ ಮಾಡುವ ಮೂಲಕ ಶ್ರೀರಾಮಕೃಷ್ಣರ ಪೂಜೆಯನ್ನೇ ಮಾಡುತ್ತಿದ್ದಾರೆ.'' ಅವರು ಬಹಳ ಹೊತ್ತು ಸೇವಾಶ್ರಮದಲ್ಲಿ ಕಳೆದು 'ಲಕ್ಷ್ಮೀ ನಿವಾಸ'ಕ್ಕೆ ಮರಳಿದರು. ಸ್ವಲ್ಪ ಹೊತ್ತಿನ ನಂತರ ಶ್ರೀಮಾತೆ ಚಾರು ಮಹಾರಾಜರ (ಸ್ವಾಮಿ ಶುಭಾನಂದ) ಬಳಿಗೆ ಹತ್ತು ರೂಪಾಯಿ ನೋಟೊಂದನ್ನು ಸೇವಾಶ್ರಮಕ್ಕಾಗಿ ಕಳುಹಿಸಿಕೊಟ್ಟರು. ಚಾರು ಮಹಾರಾಜರು ಕಾಶಿ ಸೇವಾಶ್ರಮದ ಸಂಸ್ಥಾಪಕರಲ್ಲಿಒಬ್ಬರು. ಆಗಿನ್ನೂ ಅವರು ಸಂನ್ಯಾಸಿಯಾಗಿರಲಿಲ್ಲ. ಆಗ ಅವರು ಚಾರುಬಾಬು, ಅಥವಾ ಚಾರುಚಂದ್ರ ದಾಸ್ ಆಗಿದ್ದರಷ್ಟೆ. ಶ್ರೀಮಾತೆಯವರ ಹಣವನ್ನು ತಂದುಕೊಟ್ಟವನು ಹೇಳಿದ, ''ಶ್ರೀಮಾತೆ ಸೇವಾಶ್ರಮದ ಕೆಲಸಕಾರ್ಯಗಳನ್ನು ನೋಡಿ ತುಂಬ ಆನಂದಗೊಂಡಿದ್ದಾರೆ. ಅದಕ್ಕೆ ಅವರು ಈ ಹಣವನ್ನು ಕಳುಹಿಸಿ ಕೊಟ್ಟಿದ್ದಾರೆ. ಅವರು ಮತ್ತೆ, 'ಸೇವಾಶ್ರಮವನ್ನು ನೋಡಿ ನನಗೆ ಎಷ್ಟೊಂದು ಹಿಡಿಸಿತೆಂದರೆ ಇಲ್ಲೇ ಶಾಶ್ವತವಾಗಿ ನೆಲೆಸಿಬಿಡೋಣ ಅನ್ನಿಸಿತು' ಎಂದರು.'' ಶ್ರೀಮಾತೆಯವರ ಈ ಮಾತನ್ನು ಕೇಳಿ ಸ್ವಾಮಿ ಬ್ರಹ್ಮಾನಂದರು, ಮಹಾಪುರುಷ್ ಮಹಾರಾಜ್ (ಸ್ವಾಮಿ ಶಿವಾನಂದರು), ಹರಿ ಮಹಾರಾಜ್ (ಸ್ವಾಮಿ ತುರೀಯಾನಂದರು), ಕೇದಾರಬಾಬಾ (ಸ್ವಾಮಿ ಅಚಲಾನಂದರು), ಚಾರು ಮಹಾರಾಜ್ ಮೊದಲಾದವರಿಗೆಲ್ಲ ಎಂಥ ಆನಂದವುಂಟಾಯಿತು! ಆಗ ಮಾಸ್ಟರ್ ಮಹಾಶಯ ಕೂಡ ಕಾಶಿಯಲ್ಲಿದ್ದರು.



---

೧ ಕ್ರಿ.ಶ.೧೯೧೩ರ ನವಂಬರ್ ೮ರಂದು.

ಅವರಿಗೆ ಸೇವಾಶ್ರಮದ ಕೆಲಸಕಾರ್ಯಗಳೆಲ್ಲ ಹಿಡಿಸುತ್ತಿರಲಿಲ್ಲ. ಅವರ ಪ್ರಕಾರ ರೋಗಿಗಳ ಸೇವೆ, ಆಸ್ಪತ್ರೆ ನಡೆಸುವುದು ಇವೆಲ್ಲ ಸಾಧುಸಂನ್ಯಾಸಿಗಳು ಮಾಡುವ ಕೆಲಸವಲ್ಲ. ಇವೆಲ್ಲ ಶ್ರೀರಾಮ ಕೃಷ್ಣರ ಆದರ್ಶಗಳಿಗೆ ವಿರುದ್ಧವಾದದ್ದು. ಸಾಧುಗಳು ಕೇವಲ ಸಾಧನೆ, ಭಜನೆಗಳಲ್ಲಿ ನಿರತರಾಗಿರಬೇಕು. ಶ್ರೀಮಾತೆ ಸೇವಾಶ್ರಮವನ್ನು ಭೇಟಿಯಾದ ನಂತರ ಅದನ್ನು ಕುರಿತು ಅವರು ವ್ಯಕ್ತಪಡಿಸಿದ ಅಭಿಪ್ರಾಯ ಹಾಗೂ ಅವರು ಹತ್ತು ರೂಪಾಯಿ ನೋಟನ್ನು ಕಳುಹಿಸಿಕೊಟ್ಟದ್ದನ್ನು ಉಲ್ಲೇಖಿಸಿ ಸ್ವಾಮಿ ಬ್ರಹ್ಮಾನಂದರು ಮಾಸ್ಟರ್ ಮಹಾಶಯರಿಗೆ, ''ಎಲ್ಲವನ್ನೂ ಕೇಳಿದಿರಿ ತಾನೆ?'' ಎಂದರು. ಅದಕ್ಕೆ ಮಾಸ್ಟರ್ ಮಹಾಶಯರು ಹೇಳಿದರು, ''ಶ್ರೀಮಾತೆಯವರೇ ಹಾಗೆ ಹೇಳಿರುವಾಗ ಬೇರೆ ಮಾತೇನಿದೆ? ಇದೆಲ್ಲವೂ ಖಂಡಿತ ಶ್ರೀರಾಮಕೃಷ್ಣರ ಕೆಲಸವೇ, ಅಲ್ಲವೆನ್ನುವುದಕ್ಕೆ ಮಾರ್ಗವೆಲ್ಲಿದೆ?'' ಎಂದರು.

ಶ್ರೀಮಾತೆ ಬಹಳ ದಿನ ಕಾಶಿಯಲ್ಲಿದ್ದರು. ನಡುನಡುವೆ ಅವರು ಅದ್ವೈತ ಆಶ್ರಮ ಹಾಗೂ ಸೇವಾಶ್ರಮಕ್ಕೆ ಹೋಗಿಬಂದು ಮಾಡುತ್ತಿದ್ದರು. ರಾಜಾ ಮಹಾರಾಜರು ಪ್ರತಿದಿನ ಬೆಳಿಗ್ಗೆ ಹೊತ್ತು ಶ್ರೀಮಾತೆಯವರಿಗೆ ಪ್ರಣಾಮ ಮಾಡಲು 'ಲಕ್ಷ್ಮೀ ನಿವಾಸ'ಕ್ಕೆ ಹೋಗುತ್ತಿದ್ದರು. ಅವರೊಂದಿಗೆ ಒಮ್ಮೊಮ್ಮೆ ನಾವೂ ಇರುತ್ತಿದ್ದೆವು. ಆಗ ನಾನು ಶ್ರೀಮಾತೆಯವರೊಂದಿಗೆ ಹೆಚ್ಚು ಮಾತುಕತೆ ನಡೆಸಲಾಗುತ್ತಿರಲಿಲ್ಲ ; ಆದರೂ ಅವರು ನನ್ನ ಮೇಲೆ ವಿಶೇಷ ಪ್ರೀತಿಯನ್ನು ಹೊಂದಿದ್ದುದರ ಸೂಚನೆ ನನಗೆ ಸಿಗುತ್ತಿತ್ತು. ೧೯೧೪ ನೇ ಇಸವಿಯ ಡಿಸೆಂಬರ್ ತಿಂಗಳ ಕೊನೆಯ ಭಾಗದಲ್ಲಿ ರಾಜಾ ಮಹಾರಾಜರ ಸೂಚನೆಯ ಮೇರೆಗೆ ನಾನು ಬೇಲೂರು ಮಠಕ್ಕೆ ಹೋದೆ. ಆಗ ಶ್ರೀಮಾತೆ 'ಉದ್ಬೋಧನ'ದಲ್ಲಿದ್ದರು. ಶ್ರೀಮಾತೆಯವರ ದರ್ಶನ ಪಡೆಯಲು ನಾನು 'ಉದ್ಬೋಧನ'ಕ್ಕೆ ಹೋದೆ. ನಾನು ಬೇಲೂರು ಮಠಕ್ಕೆ ಹೋಗುವ ಒಂದೆರಡು ತಿಂಗಳ ಮೊದಲು ನೆರೆ ಪರಿಹಾರ ಕಾರ್ಯಕ್ಕಾಗಿ ಕಾಶಿಯಿಂದ ಪಶ್ಚಿಮ ಬಂಗಾಳಕ್ಕೆ ಹೋಗಿದ್ದೆ. ಆಗ ಉಂಟಾದ ಅತಿಯಾದ ಪರಿಶ್ರಮ ಹಾಗೂ ಅನಿಯಮಿತವಾದ ದಿನಚರಿಯಿಂದಾಗಿ ಇರಬೇಕು, ನಾನು ದೈಹಿಕವಾಗಿ ದುರ್ಬಲನಾಗಿದ್ದೆ. ಶ್ರೀಮಾತೆಯವರ ಕಣ್ಣಿಗೆ ಇದು ಬೀಳದಿರಲಿಲ್ಲ. ಅವರು ನನ್ನನ್ನು ನೋಡುತ್ತಲೇ ಅತ್ಯಂತ ಉದ್ವಿಗ್ನರಾಗಿ ಆತಂಕದ ಧ್ವನಿಯಿಂದ ಕೇಳಿದರು: ''ಇದೇನು, ನಿನ್ನ ದೇಹಸ್ಥಿತಿ ಹೀಗಾಗಿದೆ?'' ನಾನಂದೆ, ''ಕೆಲವು ದಿನಗಳಿಂದ ನೆರೆ ಪರಿಹಾರ ಕಾರ್ಯದಲ್ಲಿ ತೊಡಗಿದ್ದೆ. ಅಲ್ಲಿ ಊಟ ಇತ್ಯಾದಿಗಳ ವ್ಯವಸ್ಥೆ ಅಷ್ಟು ಚೆನ್ನಾಗಿರಲಿಲ್ಲ. ಅದಕ್ಕೆ ಬಹುಶಃ ದೇಹಾರೋಗ್ಯ ತುಸು ಕೆಟ್ಟಿರಬೇಕು.'' ''ತುಸು ಏನಲ್ಲ, ಚೆನ್ನಾಗಿಯೇ ಕೆಟ್ಟುಹೋಗಿದೆ. ಸ್ವಲ್ಪ ದಿನ ಚೆನ್ನಾಗಿ ಊಟ, ತಿಂಡಿ ಮಾಡಿ ಒಳ್ಳೆಯ ಆರೋಗ್ಯವನ್ನು ಮತ್ತೆ ಸಂಪಾದಿಸು'' ಎಂದರು ಶ್ರೀಮಾತೆ. ''ನೀವು ಶ್ರೀರಾಮಕೃಷ್ಣರ ಕೆಲಸ ಎಷ್ಟೊಂದು ಮಾಡುವಿರಂತೆ? ದೇಹಾರೋಗ್ಯ ಚೆನ್ನಾಗಿಲ್ಲದಿದ್ದರೆ ಹೇಗೆ ನಡೆದೀತು?'' ಎಂದರು. ಬೇಲೂರು ಮಠಕ್ಕೆ ಹಿಂದಿರುಗುವಾಗ ಶ್ರೀಮಾತೆ ಮತ್ತೆ ಆ ವಿಷಯವನ್ನೇ ನೆನಪಿಸಿದರು. ಈ ಬಾರಿ ನಾನು ಬೇಲೂರು ಮಠದಲ್ಲಿ ಸ್ವಾಮಿ ಬ್ರಹ್ಮಾನಂದರ ಸೇವೆಗೆಂದು ಕೆಲವು ಸಮಯದ ಮಟ್ಟಿಗೆ ನಿಯುಕ್ತನಾಗಿದ್ದೆ. ಈ ವೇಳೆಗೆ ನನಗೆ ಉತ್ತರಾಖಂಡಕ್ಕೆ ಹೋಗಿ, ಕೆಲವು ದಿನ ತಪಸ್ಸು-ಸಾಧನೆಗಳಲ್ಲಿ ಕಳೆಯಬೇಕೆಂದು ಪ್ರಬಲ ಆಕಾಂಕ್ಷೆ ಉಂಟಾಯಿತು. ಶ್ರೀಮಾತೆಯವರು ಆಗ 'ಉದ್ಬೋಧನ'ದಲ್ಲಿದ್ದರು, ನಾನು ಅಲ್ಲಿಗೆ ಹೋಗಿ ಅವರಿಗೆ ನನ್ನ ಬಯಕೆಯನ್ನು ತಿಳಿಸಿ, ಅವರ ಅನುಮತಿಯನ್ನು ಬೇಡಿದೆ. ಶ್ರೀಮಾತೆ ಮೊದಮೊದಲು ಅದಕ್ಕೆ ಒಪ್ಪಲಿಲ್ಲ. ಅವರು ತುಂಬ ಕಳಕಳಿಯಾಗಿ ಹೇಳಿದರು, ''ಇಲ್ಲ ಮಗೂ, ನೀನಿನ್ನೂ ಹುಡುಗ. ಈಗ ನೀನು ತಪಸ್ಸು ಮಾಡಿ ಏನೂ ಪ್ರಯೋಜನವಿಲ್ಲ. ಅಲ್ಲಿಗೆ ಹೋಗಿ ನೀನೆಲ್ಲಿ ಇರುತ್ತೀಯಾ, ಊಟಕ್ಕೆ ಏನು ಮಾಡುತ್ತೀಯಾ ಹೇಳು?'' ನಾನು ಬಿಡುವವನಲ್ಲ, ಅವರ ಅಪ್ಪಣೆಗಾಗಿ ಬೇಡುತ್ತ ನಾನು ಕಾದು ನಿಂತೆ. ಮತ್ತೆ ಶ್ರೀಮಾತೆ ಹೇಳಿದರು, ''ಇಲ್ಲ ಮಗೂ, ನಿನಗೆ ಕಷ್ಟವಾಗಬಹುದು. ನೀನು ತಪಸ್ಸಿಗಾಗಿ ಹೋಗಬೇಕಾದ ಅಗತ್ಯವಿಲ್ಲ ನೋಡು.'' ಶ್ರೀಮಾತೆಯವರ ಕಂಠದಿಂದ ಹೊರಬಂದ ಮಾತುಗಳಲ್ಲಿ ವ್ಯಾಕುಲತೆಗಳಿದ್ದವು. ಆದರೆ ನಾನು ಹಠ ಬಿಡಲಿಲ್ಲ. ಹಲವು ಬಾರಿ ನಾನು ಪ್ರಾರ್ಥಿಸುತ್ತಲೇ ಇದ್ದೆ; ಕೊನೆಗೂ ಅವರು ನನಗೆ ಅನುಮತಿ ನೀಡಬಹುದೆಂದು. ಕೊನೆಗೆ ಶ್ರೀಮಾತೆ ಹೇಳಿದರು, ''ಸರಿ ಮಗೂ, ನೀನು ತಪಸ್ಸು ಮಾಡಲು ಅಷ್ಟೊಂದು ವ್ಯಾಕುಲನಾಗಿದ್ದರೆ, ಕಾಶಿಗೆ ಹೋಗಿಬಿಡು. ಅಲ್ಲಿ 'ಸೇವಾಶ್ರಮ'ದಲ್ಲಿ ಇದ್ದುಕೊಂಡು, ಹೊರಗೆ ಭಿಕ್ಷಾಟನೆ ಮಾಡು. ಬೇರೆಲ್ಲಿಗೂ ಹೋಗಬೇಡ.'' ಆಗ ನಾನು ಶ್ರೀಮಾತೆಯವರಿಗೆ ಹೇಳಿದೆ, ''ಅಮ್ಮಾ ಹಾಗಿದ್ದರೆ ನಾನು ಕಾಶಿಗೆ ನಡೆದೇ ಹೋಗುತ್ತೇನೆ.'' ಮೊದಲು ಅದಕ್ಕೆ ಒಪ್ಪಲಿಲ್ಲ ಶ್ರೀಮಾತೆ. ಅನಂತರ ಅವರು ನನ್ನ ಪ್ರಾರ್ಥನೆಗೆ ಮಣಿದು, ಅದಕ್ಕೊಪ್ಪಿದರು. ಶ್ರೀಮಾತೆಯವರನ್ನು ಬೀಳ್ಕೊಳ್ಳುವಾಗ ಅವರು ನನ್ನ ತಲೆಯ ಮೇಲೆ ಕೈಯಿಟ್ಟು ಹೇಳಿದರು, ''ನಿನಗೆ ಚೆನ್ನಾಗಿ ಆಶೀರ್ವಾದ ಮಾಡುತ್ತೇನೆ, ಮಗೂ. ನಿನಗೆ ಸಿದ್ಧಿಯುಂಟಾಗಲಿ.'' ತಿಂಗಳ ನಂತರ ಶ್ರೀಮಾತೆಯವರ ಆಶೀರ್ವಾದದೊಂದಿಗೆ ನಾನು ಪಾದಚಾರಿಯಾಗಿ ಕಾಶಿಗೆ ಹೊರಟೆ. ಈ ಬಾರಿ ನಾನು ಏಳೆಂಟು ತಿಂಗಳು ಕಾಶಿಯಲ್ಲಿದ್ದೆ. ಅಲ್ಲಿಂದ ಬೇಲೂರು ಮಠಕ್ಕೆ ಹಿಂತಿರುಗಿದ ಬಳಿಕ ಮತ್ತೆ ಸ್ವಾಮಿ ಬ್ರಹ್ಮಾನಂದರ ಸೇವೆಗಾಗಿ ನಿಯುಕ್ತನಾದೆ.

ಸ್ವಾಮಿ ಬ್ರಹ್ಮಾನಂದರು ಬಲರಾಮ ಮಂದಿರದಲ್ಲಿ[೨] ತಂಗುವುದನ್ನು ಇಷ್ಟಪಡುತ್ತಿದ್ದರು. ಸಾಮಾನ್ಯವಾಗಿ ಅವರು ಬೇಲೂರು ಮಠದಿಂದ ಬಲರಾಮ ಮಂದಿರಕ್ಕೆ ಬರುತ್ತಿದ್ದರು. ಬಲರಾಮ ಮಂದಿರದಲ್ಲಿ ರಾಜಾ ಮಹಾರಾಜರೊಂದಿಗೆ ಇರಬೇಕಾಗಿದ್ದ

---

೨ ಶ್ರೀರಾಮಕೃಷ್ಣರ ಗೃಹೀ ಭಕ್ತರಲ್ಲಿ ಪ್ರಮುಖನಾದ ಬಲರಾಮ ಬಸುವಿನ ಮನೆಯೇ 'ಬಲರಾಮ ಮಂದಿರ'. ಶ್ರೀರಾಮಕೃಷ್ಣರು ಅನೇಕ ಬಾರಿ ಅಲ್ಲಿಗೆ ಭೇಟಿ ನೀಡಿದ್ದರು. ಸ್ವಾಮೀಜಿ, ಬ್ರಹ್ಮಾನಂದರೇ ಮೊದಲಾದ ಶ್ರೀರಾಮಕೃಷ್ಣರ ಸಂನ್ಯಾಸಿ ಶಿಷ್ಯಂದಿರು ಅಲ್ಲಿ ಹಲವು ಬಾರಿ ತಂಗಿದ್ದರು ಹಾಗೂ ತಪಸ್ಸು, ಸಾಧನೆಗಳಲ್ಲಿ ನಿರತರಾಗಿದ್ದರು. *(-ಅನು.)*

ಕಾರಣದಿಂದ ಸಾಮಾನ್ಯವಾಗಿ ನಾನು 'ಉದ್ಬೋಧನ'ಕ್ಕೆ ಹೋಗುತ್ತಿದ್ದೆ.[೩] ಆದ್ದರಿಂದ ಬಹುತೇಕ ಪ್ರತಿದಿನವೂ ನನಗೆ ಶ್ರೀಮಾತೆಯವರ ದರ್ಶನ, ಪ್ರಣಾಮ ಮಾಡುವ ಸೌಭಾಗ್ಯ ದೊರಕುತ್ತಿತ್ತು. ಅವರೊಂದಿಗೆ ಆಗಾಗ ಮಾತುಕತೆಯನ್ನು ಆಡುತ್ತಿದ್ದೆ. ಶ್ರೀಮಾತೆಯವರ ಕಂಠ ತುಂಬ ಮಧುರವಾಗಿತ್ತು. ಇತರರೆದುರು ಸಾಮಾನ್ಯವಾಗಿ ಅವರು ದೀರ್ಘವಾದ ಅವಗುಂಠನ ಹಾಕಿಕೊಂಡೇ ಮುಖ ಮರೆಸಿಕೊಂಡಿರುತ್ತಿದ್ದರು; ಆದರೆ ನಾನು ಎಂದಿಗೂ ಅವರನ್ನು ಆ ರೀತಿ ಕಂಡ ನೆನಪಿಲ್ಲ. ನಾನು ಶ್ರೀಮಾತೆಯವರನ್ನು ಕಂಡಾಗಲೆಲ್ಲ ನನಗೆ ಅವರ ಶ್ರೀಮುಖದ ದರ್ಶನಭಾಗ್ಯ ಲಭಿಸುತ್ತಿತ್ತು.

ಶ್ರೀಮಾತೆಯವರ ಕೊನೆಗಾಲದಲ್ಲಿ ಉಂಟಾದ ಅನಾರೋಗ್ಯದ ಸಂದರ್ಭದಲ್ಲಿ ಸ್ವಾಮಿ ಬ್ರಹ್ಮಾನಂದರು ಭುವನೇಶ್ವರದಲ್ಲಿದ್ದರು. ಅವರ ಸೇವೆಗಾಗಿ ನಾನು ಅಲ್ಲೇ ಇದ್ದೆ. ಶ್ರೀಮಾತೆಯವರು ಮಹಾಸಮಾಧಿಯನ್ನು ಹೊಂದಿದ ದಿನ (೧೯೨೦ರ ಜುಲೈ ೨೧ರ ಮಂಗಳವಾರದಂದು) ರಾತ್ರಿ ಸುಮಾರು ೧.೩೦ ಗಂಟೆಯ ಹೊತ್ತಿಗೆ ರಾಜಾ ಮಹಾರಾಜರ ಕೋಣೆಯನ್ನು ಹೊಕ್ಕು ನೋಡಿದೆ — ಅವರು ಒಂದು ಉಣ್ಣೆಯ ಶಾಲಿನಿಂದ ದೇಹವನ್ನೆಲ್ಲ ಮುಚ್ಚಿ ಆರಾಮ ಕುರ್ಚಿಗೊರಗಿ ಕುಳಿತಿದ್ದರು. ಅವರ ಮುಖ ಗಂಭೀರವಾಗಿತ್ತು. ಅವರು ನನ್ನನ್ನು ನೋಡಿ ಹೇಳಿದರು, ''ಸೂರ್ಯ[೪], ರಾತ್ರಿ ಎಷ್ಟು ಗಂಟೆ ಈಗ? ಯಾಕೋ ಗೊತ್ತಿಲ್ಲ, ಶ್ರೀಮಾತೆಯವರಿಗೋಸ್ಕರ ಮನಸ್ಸು ತುಂಬ ಕಾತರಗೊಂಡಿದೆ. ಅವರು ಹೇಗಿದ್ದಾರೋ — ಯಾರಿಗೆ ಗೊತ್ತು?'' ನಾನು ಅವರನ್ನು ಕೇಳಿದೆ, ''ನೀವು ಮಲಗುವುದಿಲ್ಲವೆ?'' ಅದಕ್ಕೆ ಮಹಾರಾಜರು ಏನನ್ನೂ ಹೇಳಲಿಲ್ಲ. ಮಹಾರಾಜರ ಗಂಭೀರ ಮುಖಭಾವವನ್ನು ಹಾಗೂ ಶ್ರೀಮಾತೆಯವರನ್ನು ಕುರಿತು ಅವರ ಮನಸ್ಸು ಖಿನ್ನವಾದದ್ದನ್ನು ಕಂಡು, ಅವರ ಮನಸ್ಸನ್ನು ತುಸು ಹಗುರಗೊಳಿಸುವ ಸಲುವಾಗಿ ನಾನು ಕೇಳಿದೆ, ''ತಂಬಾಕು ತಯಾರುಮಾಡಿ ಕೊಡಲೆ?'' ಮಹಾರಾಜರು ಅದಕ್ಕೆ ಯಾವ ಪ್ರತಿಕ್ರಿಯೆಯನ್ನೂ ನೀಡದೆ, ಅದೇ ಭಾವದಲ್ಲಿ ಕುಳಿತಿದ್ದರು. ಅವರು ಹಾಗೆಯೇ ಕುಳಿತಿದ್ದನ್ನು ಕಂಡು ಅವರ ಬಳಿ ಇನ್ನೇನನ್ನೂ ಕೇಳುವ ಧೈರ್ಯ ನನಗಾಗಲಿಲ್ಲ. ಮೆಲ್ಲಮೆಲ್ಲನೆ ನಾನು ಅವರ ಕೋಣೆಯಿಂದ ಹೊರಬಂದೆ. ಮರುದಿನ ಬೆಳಿಗ್ಗೆ ರಾಜಾ ಮಹಾರಾಜರು ತುಸು ಅಧೀರರಾಗಿದ್ದಂತೆ ಕಂಡು ಬಂತು. ಬೇರೆ ದಿನಗಳಲ್ಲಿ ಅವರು ಬೆಳಗಿನ ಹೊತ್ತು ತುಸು ತಿರುಗಾಡಲು ಹೋಗುತ್ತಿದ್ದರು. ಆದರೆ ಇಂದು ಹೋಗಲಿಲ್ಲ. ಎದುರಿನ ಅಂಗಳದಲ್ಲೇ ಶತಪಥ ಹಾಕಲು ಆರಂಭಿಸಿದರು. ಅಂದೇ ಅಂಚೆ ಕಛೇರಿಯಿಂದ ಒಬ್ಬ ಪೇದೆ ಒಂದು ಟೆಲಿಗ್ರಾಂ ತಂದುಕೊಟ್ಟ. ಅದನ್ನು ಶರತ್ ಮಹಾರಾಜರು (ಸ್ವಾಮಿ ಶಾರದಾನಂದರು) ಕಳುಹಿಸಿದ್ದರು : ಹಿಂದಿನ ರಾತ್ರಿ ಸುಮಾರು ೧.೩೦ ಗಂಟೆಯ ಹೊತ್ತಿಗೆ ಶ್ರೀಮಾತೆ ದೇಹತ್ಯಾಗ ಮಾಡಿದರು ಎಂಬುದಾಗಿ. ನನಗೆ ನೆನಪಾಯಿತು — ಹಿಂದಿನ ರಾತ್ರಿ ಸುಮಾರು ಅದೇ ಸಮಯಕ್ಕೆ ರಾಜಾ ಮಹಾರಾಜ್ ನಿದ್ದೆಯಿಂದೆದ್ದು ಕುಳಿತು, 'ಶ್ರೀಮಾತೆಯವರ ಬಗ್ಗೆ ನನ್ನ ಮನಸ್ಸು ತುಂಬ ಕಾತರಗೊಂಡಿದೆ' ಎಂದು ಹೇಳಿದ್ದರು. ಸುದ್ದಿ ತಿಳಿದ ರಾಜಾ ಮಹಾರಾಜರ ಮುಖ ಒಂದು ಬಗೆಯ ಹೇಳಲಾರದ ನೋವಿನಿಂದ ಕಂಪಿಸಿತು. ಅವರು ಮಲಗಿಕೊಂಡರು. ಸ್ವಲ್ಪ ಹೊತ್ತಿನ ನಂತರ ಎದ್ದು ಕುಳಿತು ಹೇಳಿದರು, ''ನಾನು ಹವಿಷ್ಯಾನ್ನ ಊಟ ಮಾಡುತ್ತೇನೆ. ಶ್ರೀಮಾತೆಯವರ ಶಿಷ್ಯಂದಿರೆಲ್ಲ ಮೂರು ದಿನ ಹವಿಷ್ಯಾನ್ನ ಊಟಮಾಡಲಿ, ಬರಿಗಾಲಲ್ಲಿ ನಡೆಯಲಿ'' ಎಂದರು. ಮೂರು ದಿನ ಅವರು ಯಾರೊಂದಿಗೂ ಮಾತನಾಡಲಿಲ್ಲ. ಹನ್ನೆರಡು ದಿನ ಅವರು ಹವಿಷ್ಯಾನ್ನದಲ್ಲಿದ್ದರು ಹಾಗೂ ಬರಿಗಾಲಲ್ಲೇ ಓಡಾಡುತ್ತಿದ್ದರು. ಒಂದು ದಿನ ಅವರು ಹೇಳಿದರು — ''ಇಷ್ಟು ದಿನ ನಾವು ಪರ್ವತದ ನೆರಳಲ್ಲೇ ಇದ್ದೆವು.''

ಶ್ರೀಮಾತೆಯವರ ದೇಹವನ್ನು ಚಿತೆಯಲ್ಲಿ ದಹಿಸಿದ ನಂತರ ಮಹಾಪುರುಷ್ ಮಹಾರಾಜರು ನೆರೆದಿದ್ದ ಸಾಧು, ಭಕ್ತರ ಮುಂದೆ ಹೀಗೆಂದಿದ್ದರಂತೆ: ''ಸತಿಯ ದೇಹದ ಒಂದೊಂದು ಅಂಗ ಈ ದೇಶದ ಐವತ್ತೊಂದು ಸ್ಥಳಗಳಲ್ಲಿ ಬಿದ್ದು, ಅಲ್ಲೆಲ್ಲ ಒಂದೊಂದು ಶಕ್ತಿ ಪೀಠಗಳು ಉದ್ಭವಗೊಂಡವು. ಅದೇ ಸತಿಯ ಇಡೀ ದೇಹ ಇಂದು ಬೇಲೂರು ಮಠದ ಮಣ್ಣಿನಲ್ಲಿ ಸೇರಿ ಹೋಯಿತು. ಇದರಿಂದ ತಿಳಿದುಕೋ, ಬೇಲೂರು ಮಠ ಎಂಥ ಮಹಾತೀರ್ಥ!''

ಬೇಲೂರು ಮಠದಲ್ಲಿ ಗಂಗಾನದಿಯ ತೀರದಲ್ಲಿ ಮೂರು ಮಂದಿರಗಳಿವೆ (ಸ್ವಾಮಿ ಬ್ರಹ್ಮಾನಂದರದು, ಶ್ರೀಮಾತೆಯವರದು ಹಾಗೂ ಸ್ವಾಮೀಜಿಯವರದು). ಇವುಗಳ ನಡುವೆ ಶ್ರೀಮಾತೆಯವರ ಮಂದಿರ ಮಾತ್ರ ಗಂಗೆಗೆ ಎದುರಾಗಿ ನಿಂತಿದೆ. ಹೀಗೆ ಅದು ಉಳಿದ ಎರಡಕ್ಕಿಂತ ಭಿನ್ನ. ಶ್ರೀಮಾತೆಯವರಿಗೆ ಗಂಗೆಯೆಂದರೆ ಪಂಚಪ್ರಾಣ. ಗಂಗಾಸ್ನಾನ, ಗಂಗಾದರ್ಶನ, ಗಂಗಾತೀರದಲ್ಲಿ ವಾಸ ಎಂದರೆ ಅವರಿಗೆ ಅತ್ಯಂತ ಪ್ರೀತಿ. ಆದ್ದರಿಂದಲೇ ಶ್ರೀಮಾತೆಯವರ ಮಂದಿರ ಗಂಗೆಗೆ ಅಭಿಮುಖವಾಗಿದೆ. ಶ್ರೀಮಾತೆ ಸದಾ ಗಂಗಾದರ್ಶನ ಮಾಡುತ್ತಲೇ ಇರುತ್ತಾರೆ.

ರಾಜಾ ಮಹಾರಾಜರು ಹೇಳುತ್ತಿದ್ದರು, ''ಶ್ರೀಮಾತೆಯವರನ್ನು ಅರಿತುಕೊಳ್ಳುವುದು ತುಂಬಾ ಕಷ್ಟ. ಸಾಮಾನ್ಯ ಹೆಂಗಸರಂತೆ ಅವರು ಮುಖದ ಮೇಲೆ ಸೆರಗೆಳೆದುಕೊಂಡು ಇರುತ್ತಿದ್ದರು. ಆದರೆ ಅವರು ಸಾಕ್ಷಾತ್ ಜಗನ್ಮಾತೆ. ಶ್ರೀರಾಮಕೃಷ್ಣರೇ ಅವರನ್ನು ಅರಿತುಕೊಳ್ಳುವಂತೆ ಮಾಡದಿರುತ್ತಿದ್ದರೆ ನಮಗೆ ಅವರನ್ನು ತಿಳಿಯಲು ಎಂದಾದರೂ ಸಾಧ್ಯವಿತ್ತೆ?'' ಒಬ್ಬ ಭಕ್ತರು ನನಗೊಮ್ಮೆ ಹೇಳಿದರು, ಅವರಿಗೆ ಶ್ರೀಮಾತೆ ಸ್ವತಃ ತಾವೇ ಹೇಳಿದ್ದರಂತೆ — ''ನಾನೇ ಸೀತೆ'' ಎಂಬುದಾಗಿ.

---

೩. 'ಬಲರಾಮ ಮಂದಿರ'ದ ಸಮೀಪದಲ್ಲೇ 'ಉದ್ಬೋಧನ' ಅಥವಾ ಶ್ರೀಮಾತೆಯವರ ಮನೆ ಇದೆ. *(-ಅನು.)*

೪ ಲೇಖಕರ ಪೂರ್ವಾಶ್ರಮದ ಹೆಸರು. *(-ಅನು.)*

# ಮಾನವ ಚೈತನ್ಯದ ಮೂಲ

**ಸ್ವಾಮಿ ರಂಗನಾಥಾನಂದ**



ಮಾನವನ ನೈಜ ಸ್ವರೂಪವು ಸಾಕ್ಷಾತ್ ಪರಬ್ರಹ್ಮವೇ ಆಗಿದೆ; ಅನೇಕ ಉಪಾಧಿಗಳಿಂದ ಆವೃತವಾಗಿ ತನ್ನ ಸ್ವರೂಪವನ್ನು ಮರೆತ ಮಾನವನು ಆಧ್ಯಾತ್ಮಿಕ ಸಾಧನೆಗಳಿಂದ ಮರಳಿ ತನ್ನ ಮೂಲಸ್ಥಿತಿಯನ್ನು ಕಂಡುಕೊಳ್ಳಬಹುದಾಗಿದೆ ಎಂಬ ವೇದಾಂತ ತತ್ತ್ವವನ್ನು ಸ್ಪಷ್ಟವಾಗಿ ಜಗತ್ತಿನಾದ್ಯಂತ ಸಾರಿದವರು ಸ್ವಾಮಿ ವಿವೇಕಾನಂದರು. ಅವರ ಮಾರ್ಗವನ್ನೇ ಅನುಸರಿಸಿ ವಿಜ್ಞಾನ ಮತ್ತು ಅಧ್ಯಾತ್ಮಗಳ ನಡುವಿನ ಸಮನ್ವಯದ ಅಗತ್ಯವನ್ನು ಪ್ರತಿಪಾದಿಸಿದವರು ರಾಮಕೃಷ್ಣ ಮಹಾಸಂಘದ ೧೩ನೇ ಪರಮಾಧ್ಯಕ್ಷರಾಗಿದ್ದ ಪರಮಪೂಜ್ಯ ಸ್ವಾಮಿ ರಂಗನಾಥಾನಂದಜಿಯವರು. ವಿಖ್ಯಾತ ವಾಗ್ಮಿಯೂ, ಲೇಖಕರೂ ಆಗಿದ್ದ ಅವರು ಹಲವು ಮಂದಿ ಆಧ್ಯಾತ್ಮಿಕ ಪಿಪಾಸುಗಳಿಗೆ ಗುರುವಾಗಿ ಮಾರ್ಗದರ್ಶನ ನೀಡಿದವರು. ಅವರು ಚಿಕಾಗೋದ ವೇದಾಂತ ಸೊಸೈಟಿಯಲ್ಲಿ ೧೯೬೮ರಲ್ಲಿ ನೀಡಿದ ಪ್ರವಚನವನ್ನು ಆಧರಿಸಿ ರಚಿತವಾದ, ‘The Approach to Truth in Vedanta’ ಎಂಬ ಗ್ರಂಥದಿಂದ ಆಯ್ದ ಕೆಲವು ಭಾಗಗಳ ಅನುವಾದವಿದು.

**ಸ**ತ್ಯ ಹಾಗೂ ಮಾನವ ಕಲ್ಯಾಣದ ಬಗ್ಗೆ ವೇದಾಂತವು ಹೊಂದಿದ್ದ ಒಲವಿನಿಂದಾಗಿ, ಅದು ಮಾನವನನ್ನು ಕುರಿತು ಆಳವಾಗಿ ಅಧ್ಯಯನ ನಡೆಸುವ ವಿಜ್ಞಾನವೊಂದನ್ನು ಅಭಿವೃದ್ಧಿಪಡಿಸಿತು. ಇದರಿಂದ, ಸಾಂತನೂ ಮರ್ತ್ಯನೂ ಆದ ಮಾನವನ ಒಳಗೆ ಅನಂತವೂ ಅಮರವೂ ಆದ ಆತ್ಮವಿದೆ ಎಂದು ವೇದಾಂತ ಕಂಡುಹಿಡಿಯಿತು. ಭೌತಿಕ ವಿಜ್ಞಾನದಲ್ಲಿರುವಂತೆ ಇಲ್ಲಿ ಕರಾರುವಾಕ್ಕಾದ ಅಳತೆ, ಲೆಕ್ಕಚಾರಗಳು ಇಲ್ಲದಿರಬಹುದು. ಭೌತಿಕ ವಿಜ್ಞಾನದಲ್ಲಿ ಪ್ರಮಾಣ ಮುಖ್ಯ; ಆದರೆ ವೇದಾಂತದಲ್ಲಿ ನೀವು ಅಧ್ಯಯನ ಮಾಡುತ್ತಿರುವುದು ನಿಮ್ಮನ್ನು ಕುರಿತು — ಹೀಗಾಗಿ ಇಲ್ಲಿ ಜೀವನದ ಗುಣವೇ ಮುಖ್ಯ, ಪ್ರಮಾಣವಲ್ಲ. ಇಂಥ ಅನ್ವೇಷಣೆಯಿಂದ ಮಾತ್ರ ಮಾನವನ ಜೀವನದಲ್ಲಿ ಮೂಲಭೂತ ಉನ್ನತಿ ಉಂಟಾಗುವುದು. ಉಪನಿಷತ್ತುಗಳು ಮಾನವನನ್ನು ಕುರಿತ ಶ್ರೇಷ್ಠವಾದ ವಿಜ್ಞಾನವನ್ನು ಅಭಿವೃದ್ಧಿಪಡಿಸಿದುದು ಹೀಗೆ. ಮಾನವನು ಹೊರನೋಟದಿಂದ ಹೀಗೆ ಕಾಣಿಸಿಕೊಳ್ಳುತ್ತಾನೆ; ಆದರೆ ಅವನು ಅಂತರಂಗದಲ್ಲಿ ಬೇರೆಯೇ ಆಗಿದ್ದಾನೆ. ಮಾನವನು ಸ್ವಾತಂತ್ರ್ಯ ಹಾಗೂ ಆವಶ್ಯಕತೆಗಳ ಅತ್ಯುತ್ತಮ ಸಂಮಿಶ್ರಣವಾಗಿದ್ದಾನೆ; ಅದೇ ರೀತಿ ಅವನು ಮರ್ತ್ಯ ಹಾಗೂ ಅಮೃತ ಈ ಎರಡರ ಸಂಮಿಶ್ರಣವೂ ಆಗಿದ್ದಾನೆ. ಮಹಾಭಾರತ ಹೇಳುತ್ತದೆ:

**ಅಮೃತಶ್ಚೈವ ಮೃತ್ಯುಶ್ಚ ದ್ವಯಂ ದೇಹೇ ಪ್ರತಿಷ್ಠಿತಮ್ ।**
**ಮೃತ್ಯುರಾಪದ್ಯತೇ ಮೋಹಾತ್ ಸತ್ಯೇನಾಪದ್ಯತೇಽಮೃತಮ್ ॥**

‘ಅಮೃತತ್ವ ಹಾಗೂ ಮರ್ತ್ಯತ್ವ ಎರಡೂ ದೇಹದಲ್ಲಿ ನೆಲೆಸಿದೆ. ಮೋಹವನ್ನು ಹಿಂಬಾಲಿಸಿ ಹೋಗುವುದರಿಂದ ಮೃತ್ಯು ಲಭಿಸುವುದು; ಸತ್ಯವನ್ನು ಹಿಂಬಾಲಿಸುವುದರಿಂದ ಅಮೃತತ್ವವು ಲಭಿಸುವುದು.’

ವೇದಾಂತವು ಮಾನವನ ಮುಂದಿಟ್ಟಿರುವ ಸವಾಲು ಇದು. ಈ ಸವಾಲೆಂದರೆ: ಈ ಜನ್ಮದಲ್ಲಿಯೇ, ಈ ದೇಹದಲ್ಲಿರುವಾಗಲೇ ನಾವು ಬಲಿಷ್ಠವಾದ ಚಾರಿತ್ರ್ಯ ಹಾಗೂ ವ್ಯಕ್ತಿತ್ವವನ್ನು ನಿರ್ಮಿಸಿಕೊಳ್ಳಬಹುದು; ನಮ್ಮ ವಿವೇಕ, ಅನುಕಂಪೆ, ಮಾನಸಿಕ ಸ್ಥಿರತೆ ಹಾಗೂ ನಿರ್ಭೀತಿ ಇವುಗಳನ್ನು ಸಮೃದ್ಧಗೊಳಿಸಬಹುದು. ಬಾಹ್ಯವಾದ ದೈಹಿಕ ಚೈತನ್ಯ ಒಳ್ಳೆಯದೂ ಅಲ್ಲ, ಕೆಟ್ಟದೂ ಅಲ್ಲ. ಆದರೆ ಒಂದು ಸಲ ಮಾನವನು ಅವುಗಳ ಜೊತೆ ಸೇರಿಕೊಂಡಾಗ ಅದು ಒಳ್ಳೆಯದೋ ಕೆಟ್ಟದೋ ಆಗಿದೆ ಎನ್ನುತ್ತಾನೆ. ಇಲ್ಲೊಂದು ದೀಪವಿದೆ ಎಂದಿಟ್ಟುಕೊಳ್ಳೋಣ. ಈ ದೀಪದ ಬೆಳಕಿನಿಂದ ನಾನು ನಕಲಿ ಚೆಕ್ ಬರೆಯಬಹುದು; ಅಂತೆಯೇ ಅದರ ಬೆಳಕಿನಿಂದಲೇ ಸೇವಾಕಾರ್ಯಗಳಿಗೆ ದೊಡ್ಡ ಮೊತ್ತದ ದೇಣಿಗೆ ಕೊಡಬಹುದು. ಎರಡಕ್ಕೂ ಬೆಳಕು ಜವಾಬ್ದಾರನಲ್ಲ. ಪರಿಸ್ಥಿತಿಗನುಗುಣವಾಗಿ

ನಾನು ಅದನ್ನು ಸರಿ ಅಥವಾ ತಪ್ಪು ಎಂಬುದಾಗಿ ಅರ್ಥೈಸಿ ಕೊಂಡು ಅದನ್ನು ಬಳಸಿಕೊಳ್ಳುತ್ತೇನೆ, ಅಷ್ಟೆ.

ಭೌತಿಕ ವಿಜ್ಞಾನವು ಭೌತಿಕ ಪ್ರಪಂಚದ ಚೈತನ್ಯವನ್ನು ಅರಿಯುವ ಹಾಗೂ ನಿಯಂತ್ರಿಸುವ ಜ್ಞಾನವನ್ನು ಒದಗಿಸುತ್ತದೆ. ಆದರೆ ವೇದಾಂತವು ಪ್ರತಿಯೊಬ್ಬ ಮಾನವನಲ್ಲಿ ಅಡಗಿರುವ ಚೈತನ್ಯದ ಮೂಲವನ್ನು ಅರಸುವ ಸೊಗಸಾದ ಅನ್ವೇಷಣೆಯನ್ನು ನಮಗೆ ನೀಡುತ್ತದೆ. ಮಾನವನ ದೇಹವಿಲ್ಲಿದೆ — ಅದು ಚೈತನ್ಯದ ಒಂದು ಕೇಂದ್ರಬಿಂದು; ಅದನ್ನು ನಾವು 'ಸ್ನಾಯು ಬಲ' (ದೈಹಿಕ ಶಕ್ತಿ) ಎನ್ನುತ್ತೇವೆ. ಈ ಸ್ಥೂಲ ಚೈತನ್ಯ ತೀರ ಸಾಮಾನ್ಯವಾದುದು. ಒಂದು ಕಾಲದಲ್ಲಿ ಈ ಚೈತನ್ಯವೇ ತುಂಬ ಪ್ರಧಾನವಾಗಿತ್ತು. ಆದಿಮಾನವನು ಈ ದೈಹಿಕ ಶಕ್ತಿಯ ಮೇಲೆ ಮಾತ್ರ ನಿಯಂತ್ರಣ ಹೊಂದಿದ್ದ. ಇಂದು ಈ ದೈಹಿಕ ಶಕ್ತಿಯು ತೀರ ಸಾಮಾನ್ಯವೆನಿಸಿದೆ; ಏಕೆಂದರೆ ಇಂದು ವಿಜ್ಞಾನವು ಈ ದೈಹಿಕ ಶಕ್ತಿಗಿಂತ ಲಕ್ಷಪಟ್ಟು ಹೆಚ್ಚಿನ ಸಾಮರ್ಥ್ಯವಿರುವ ಚೈತನ್ಯವನ್ನು ನಿರ್ಮಿಸಬಲ್ಲುದು. ನಮ್ಮ ರಾಕೆಟ್‌ಗಳು ಸ್ನಾಯುಬಲಕ್ಕಿಂತ ಲಕ್ಷಪಟ್ಟು ಹೆಚ್ಚಿನ ಚೈತನ್ಯವಲ್ಲದೆ ಬೇರಲ್ಲ. ಆದ್ದರಿಂದ ದೈಹಿಕ ಶಕ್ತಿಯು ಅತ್ಯುನ್ನತ ಮಟ್ಟದ ಚೈತನ್ಯವಲ್ಲ.

ನೀವು ಸ್ನಾಯುವನ್ನು ನೋಡಿದಾಗ, ಅದೇ ದೊಡ್ಡದೆನಿಸುವುದು. ನಾವು ಇದನ್ನು ಸ್ಥೂಲ ಚೈತನ್ಯವೆನ್ನುತ್ತೇವೆ. ಆದರೆ ಈ ಸ್ಥೂಲಚೈತನ್ಯದ ಹಿಂದೆ ಸೂಕ್ಷ್ಮ ಚೈತನ್ಯದ ಮೂಲವಿದೆ. ಅದೇ ನರತಂತುಗಳು. ಈ ನರತಂತುಗಳು ತುಂಬ ತೆಳ್ಳಗಿವೆ; ಆದರೆ ಅದನ್ನು ಕತ್ತರಿಸಿದರೆ ಸ್ನಾಯುಗಳು ಸತ್ತಂತೆ. ಹೀಗೆ ಮಾನವನ ದೈಹಿಕ ರಚನೆಯಲ್ಲಿ ನಾವು ಚೈತನ್ಯದ ಅದ್ಭುತವಾದ ತರತಮ ಭೇದವನ್ನು ಕಾಣುತ್ತೇವೆ. ಬಾಹ್ಯ ಚೈತನ್ಯವು ಸ್ಥೂಲ ಹಾಗೂ ಸೀಮಿತ; ಆಂತರಿಕ ಚೈತನ್ಯವು ಸೂಕ್ಷ್ಮ ಹಾಗೂ ಅನಂತ. ನರವ್ಯೂಹದ ಹಿಂದೆ ಮಾನಸಿಕ ಶಕ್ತಿಯಿದೆ. ಅದರಲ್ಲಿ ಇನ್ನೂ ಹೆಚ್ಚಿನ ಚೈತನ್ಯವಿದೆ. ಅದು ಇನ್ನೂ ಸೂಕ್ಷ್ಮವಾದುದು. ನರವನ್ನಾದರೂ ನಾವು ನೋಡಬಹುದು, ಆದರೆ ಮಾನಸಿಕ ಶಕ್ತಿಯನ್ನು ನೋಡಲಾಗದು. ಪ್ರಸಿದ್ಧ ನರವ್ಯೂಹ ತಜ್ಞ ಸರ್ ಚಾರ್ಲ್ಸ್ ಶೆರಿಂಗ್ಟನ್ ಅವರು ಹೇಳುವಂತೆ, 'ಮಾನವನ ಮನಸ್ಸನ್ನು ಇಂದ್ರಿಯಗಳು ನೋಡಲಾರವು, ಅಷ್ಟೇ ಅಲ್ಲ, ಅವು ಎಂದೆಂದಿಗೂ ಹಾಗೇ ಇರುತ್ತವೆ.' ಯಾವುದೇ ಇಂದ್ರಿಯಗಳ ಮೂಲಕ ನಾವು ಮನಸ್ಸನ್ನು ನೋಡಲಾರೆವು; ಆದರೆ ಮನಸ್ಸಿನಲ್ಲಿ ಅಸಾಧಾರಣ ಚೈತನ್ಯ ಅಡಗಿರುತ್ತದೆ. ಎಂದಾದರೂ ಮಾನಸಿಕ ಆಘಾತವುಂಟಾದರೆ, ಸ್ನಾಯು, ನರ ಎಲ್ಲವೂ ಸತ್ತು ಹೋಗುತ್ತವೆ; ಅವುಗಳಲ್ಲಿ ಯಾವ ಚೈತನ್ಯವೂ ಉಳಿಯಲಾರದು. ಹೀಗೆ ನಾವು ಮಾನವನ ಅಂತರಂಗಕ್ಕೆ ಹೆಚ್ಚು ಹೆಚ್ಚು ಇಳಿದಂತೆಲ್ಲ, ಅವನ ಚೈತನ್ಯವು ಹೆಚ್ಚು ಹೆಚ್ಚು ಸೂಕ್ಷ್ಮತೆ, ಗಾಢತೆ ಹಾಗೂ ಅಂತರ್ಮುಖತೆಗಳನ್ನು ಹೊಂದುವವು.

ಕಠೋಪನಿಷತ್ತಿನ ಮೂರನೇ ಅಧ್ಯಾಯಕ್ಕೆ ಶ್ರೀ ಶಂಕರರು ಬರೆದಿರುವ ಭಾಷ್ಯದಲ್ಲಿ ಈ ಮೂರೂ ಪದಗಳನ್ನು ಬಳಸಿದ್ದಾರೆ : 'ಸೂಕ್ಷ್ಮ, ಮಹಾಂತಶ್ಚ ಪ್ರತ್ಯಗಾತ್ಮ-ಭೂತಶ್ಚ.' 'ಮಾನವನ ಚೈತನ್ಯವು ಸೂಕ್ಷ್ಮತೆ, ಮಹಾನತೆ ಹಾಗೂ ಅಂತರ್ಮುಖತೆಯ ದೃಷ್ಟಿಯಲ್ಲಿ ಮೇಲುಮೇಲಕ್ಕೆ ಹೋಗುತ್ತದೆ.' ಅಂತರಂಗದತ್ತ ಹೋದಂತೆಲ್ಲ ಗುಣ ಹಾಗೂ ಪ್ರಮಾಣದ ದೃಷ್ಟಿಯಿಂದ ಚೈತನ್ಯವು ಹೆಚ್ಚುತ್ತ ಹೋಗುವುದು; ಅದರ ಸೂಕ್ಷ್ಮತೆ ಅಧಿಕವಾಗುವುದು, ಅದರ ಮಹಾನತೆಯೂ ಹೆಚ್ಚುವುದು. ನಾವು ಇನ್ನಷ್ಟು ನಿಜವಾಗಿ ನಾವಾಗುವೆವು. ಸ್ನಾಯುಗಳು, ನಾವಲ್ಲ, ಅದು ನಮ್ಮ ಉಪಕರಣ ಅಷ್ಟೆ. ನರಗಳು ನೀವಾಗುವಿರಿ. ಇನ್ನೂ ಆಳಕ್ಕೆ ಹೋದಾಗ, ಮನಸ್ಸು ನಾವಾಗುವೆವು, ನರಗಳು ಕೇವಲ ಉಪಕರಣಗಳು, ಅಷ್ಟೆ. ಅನಂತರ ನಾವು ಮನಸ್ಸಿನ ಅಡಚಣೆಯನ್ನೂ ದಾಟಿ ಹೋಗುವೆವು. ಮನಸ್ಸಿನಾಚೆಗೆ ನಮ್ಮ ನಿಜವಾದ ಆತ್ಮವಿದೆ; ಅದು ಸ್ವತಃ ನಾವಾಗಿದ್ದೇವೆ, ಅದೆಂದಿಗೂ ವಸ್ತುವಾಗದು.

'ಅದರ ಅಸ್ತಿತ್ವವು ಅನಂತವಾದುದು' **(ಪುರುಷಂ ಮಹಾಂತಂ)** ಎಂದು ಶ್ವೇತಾಶ್ವತರ ಉಪನಿಷತ್ತು ಈ ವಿಷಯವನ್ನು ವಿವರಿಸುತ್ತದೆ. ಸಾಂತ ಮನುಷ್ಯನ ಒಳಗೆ ಅನಂತ ಮನುಷ್ಯನಿದ್ದಾನೆ. ಆಳವಾಗಿ ನಾವು ಹೋದಂತೆಲ್ಲ ಮಾನವನಲ್ಲಿ ಅಡಗಿರುವ ಇನ್ನಷ್ಟು ಹೆಚ್ಚಿನ ಚೈತನ್ಯವನ್ನೂ ನಾವು ಕಾಣುವೆವು.

ಹೀಗೆ ಆಂತರಿಕವಾಗಿ ಭೇದಿಸುತ್ತ ಹೋದಾಗ ನಾವು ಅಲ್ಲಿ ಎಂದೆಂದಿಗೂ ಇರುವ ಶುದ್ಧ ಚೈತನ್ಯದ ಅದ್ಭುತ ಮೂಲವನ್ನು ತಲುಪುತ್ತೇವೆ. ಇಂದು ನಾವು ನಮ್ಮ ದೈಹಿಕ ಶಕ್ತಿ, ಮಾನಸಿಕ ಶಕ್ತಿ ಹಾಗೂ ಬೌದ್ಧಿಕ ಶಕ್ತಿಗಳನ್ನು ಬಳಸಿಕೊಳ್ಳುತ್ತೇವೆ. ಇವೆಲ್ಲ ತೀರ ಸಾಮಾನ್ಯವಾದ ಶಕ್ತಿಗಳು. ಆದರೆ ಬಾಹ್ಯ ಪ್ರಪಂಚದಲ್ಲಿ ಅವು ಅಸಾಮಾನ್ಯ ರೀತಿಯಲ್ಲಿ ಕೆಲಸ ಮಾಡುತ್ತವೆ. ಬೌದ್ಧಿಕ ಶಕ್ತಿಗಳಿಂದಷ್ಟೇ ಮಾನವನ ಸೂಕ್ಷ್ಮತೆಗಳನ್ನು ಪರಿಹರಿಸಲಾಗದು – ವಿಶೇಷವಾಗಿ ಅಪರಾಧ, ಕ್ರೌರ್ಯಗಳು ಇಂದು ಎಲ್ಲಡೆ ವ್ಯಾಪಕಗೊಳ್ಳುತ್ತಿರುವುದನ್ನು ಕಂಡಾಗ. ಅಪರಾಧವನ್ನು ಬೌದ್ಧಿಕ ಶಕ್ತಿ ಪರಿಹರಿಸದು. ಕಾರಣ, ಅತಿಘೋರ ಅಪರಾಧಿಗಳು ಭಾರೀ ಬುದ್ಧಿವಂತರೇ ಆಗಿದ್ದಾರೆ! ಅವರಲ್ಲಿ ಬುದ್ಧಿಶಕ್ತಿ ಸಮೃದ್ಧವಾಗಿದೆ; ಆದರೆ ಆ ಬುದ್ಧಿಶಕ್ತಿಗೆ ತುಸು ಶಿಕ್ಷೆ ಅಗತ್ಯವಾಗಿದೆ. ಆ ಬುದ್ಧಿಶಕ್ತಿಯು ಇತರ ವ್ಯಕ್ತಿಗಳನ್ನು ಗೌರವಿಸಬೇಕು. ಅವರು ತಮ್ಮಲ್ಲೇ ಇರುವ ಅನಂತ ಶಕ್ತಿಯನ್ನು ಕಂಡುಕೊಳ್ಳದೆ ಹಾಗೆ ಮಾಡಲಾರರು. ತಮ್ಮ ರಕ್ತಗತ ಸ್ವಭಾವಕ್ಕೆ ಅವರು ಅಂಟಿಕೊಂಡಿರುವ ತನಕ ಹಾಗೆ ಮಾಡಲಾರರು.

ಪ್ರತಿಯೊಂದು ಮಗು ಕೂಡ ಒಂದು ಹೊಸ ದಿಕ್ಕಿನಲ್ಲಿ ಆಂತರಿಕವಾಗಿ ವಿಕಾಸ ಹೊಂದಬೇಕಾಗಿದೆ. ಅದು ಬುದ್ಧಿಯನ್ನು ಮೀರಿದ್ದು. ಹೆಚ್ಚಿನ ವಿದ್ಯಾಭ್ಯಾಸ ಹೆಚ್ಚಿನ ಪಾಂಡಿತ್ಯ ಅದನ್ನು ನೀಡಲಾರದು. ಆದ್ದರಿಂದಲೇ ಭಾರತದಲ್ಲಿ ಕೇವಲ ಪಾಂಡಿತ್ಯಕ್ಕೆ ಹೆಚ್ಚೇನೂ ಬೆಲೆಯಿಲ್ಲ. ಒಬ್ಬನು ದೊಡ್ಡ ಪಂಡಿತನಾಗಿರಬಹುದು; ಆದರೆ ಅವನಲ್ಲಿ ಪ್ರೀತಿ, ಅನುಕಂಪೆಗಳಿಲ್ಲದಿದ್ದರೆ ಅವನಿಗೆ ಸಮಾಜದಲ್ಲಿ ಹೆಚ್ಚಿನ ಗೌರವ ಲಭಿಸಲಾಗದು. ಆದ್ದರಿಂದ ಮಾನವನ ಆಧ್ಯಾತ್ಮಿಕ ಬೆಳವಣಿಗೆ ಅತ್ಯಂತ ಆವಶ್ಯಕವಾಗಿದೆ.





# ಕಳೆದ ದಿನಗಳ ನೆನಪುಗಳು

(ಸ್ವಾಮಿ ವಿರಜಾನಂದರ ಜೀವನ ಹಾಗೂ ಕೆಲವು ಸಮಕಾಲೀನ ಘಟನೆಗಳು)

ಮೂಲ ಬಂಗಾಳಿ: ಸ್ವಾಮಿ ಶ್ರದ್ಧಾನಂದ

ಅನುವಾದ: ಪ್ರವ್ರಾಜಿಕಾ ಯೋಗಾತ್ಮಪ್ರಾಣಾ

## ಭಾಗ ೨೯



**ಬೇ**ಲೂರು ಮಠದಲ್ಲಿ ಶ್ರೀರಾಮಕೃಷ್ಣ ಮಂದಿರದ ಕೆಲಸ ಮುಂದುವರಿಯುತ್ತಿತ್ತು. ಇದಕ್ಕಾಗಿ ಧನಸಹಾಯ ಮಾಡಿದ್ದ ಮಿಸ್ ಹೆಲೆನ್ ರೂಬೆಲ್ (ಭಕ್ತಿ) ಹಾಗೂ ಮಿಸೆಸ್ ಅನ್ನಾ ವೊರ್ಸ್ಟರ್ (ಅನ್ನಪೂರ್ಣಾ) ಭಾರತಕ್ಕೆ ಬಂದಿದ್ದರು. ಇವರಿಬ್ಬರೂ ಅಮೆರಿಕಾ ಸಂಯುಕ್ತ ಸಂಸ್ಥಾನದ ಪ್ರಾವಿಡೆನ್ಸ್‌ನಲ್ಲಿರುವ ವೇದಾಂತ ಕೇಂದ್ರದೊಂದಿಗೆ ಸಂಪರ್ಕ ಹೊಂದಿದ್ದವರು. ಆ ಕೇಂದ್ರದ ಅಧ್ಯಕ್ಷರಾದ ಸ್ವಾಮಿ ಅಖಿಲಾನಂದರೂ ಅನೇಕ ವರ್ಷಗಳ ನಂತರ ಭಾರತಕ್ಕೆ ಬಂದಿದ್ದರು. ಅಲ್ಲದೆ, ೫ ವರ್ಷಗಳಿಂದ ದಕ್ಷಿಣ ಅಮೆರಿಕಾದಲ್ಲಿ ಪ್ರಚಾರ ಕಾರ್ಯದಲ್ಲಿ ತೊಡಗಿದ್ದ ವಿಜಯಾನಂದರೂ ಸಹ ಕೆಲವು ದಿನಗಳ ಮಟ್ಟಿಗೆ ಭಾರತಕ್ಕೆ ಬಂದಿದ್ದರು. ಇವರೆಲ್ಲರನ್ನೂ ಭೇಟಿಯಾದ ವಿರಜಾನಂದರಿಗೆ ತುಂಬ ಆನಂದವಾಯಿತು.

ಸ್ವಾಮಿ ಅಖಿಲಾನಂದರು ಮತ್ತೆ ಅಮೆರಿಕೆಗೆ ಹಿಂದಿರುಗಿ, ಮರುವರ್ಷ ರಾಮಕೃಷ್ಣ ದೇವಾಲಯದ ಉದ್ಘಾಟನೆಯ ಸಮಯಕ್ಕೆ ಮತ್ತೆ ಭಾರತಕ್ಕೆ ಬರುವುದೆಂದು ತೀರ್ಮಾನಿಸಿದ್ದರು. ಈ ಬಾರಿ ಅವರು ತಮ್ಮ ಸಹಾಯಕ್ಕೆಂದು ಸ್ವಾಮಿ ಸತ್‌ಪ್ರಕಾಶಾನಂದರನ್ನು ಜೊತೆಯಲ್ಲಿ ಕರೆದುಕೊಂಡು ಹೋಗಬೇಕೆಂದಿದ್ದರು. ಇವರಿಬ್ಬರನ್ನೂ ಬೀಳ್ಕೊಡಲು ಮಠದ ಸೋದರರು ಒಂದು ಸಭೆಯನ್ನು ಕರೆದು, ಅದಕ್ಕೆ ವಿರಜಾನಂದರನ್ನು ಅಧ್ಯಕ್ಷರನ್ನಾಗಿ ಮಾಡಿದ್ದರು.

ಶ್ರೀರಾಮಕೃಷ್ಣರ ಜನ್ಮ ಶತಮಾನೋತ್ಸವದ ಪ್ರಯುಕ್ತ ಇಡೀ ಭಾರತದಲ್ಲೇ ಅಲ್ಲದೆ ಭಾರತದ ಹೊರಗೂ ನಾನಾ ಸ್ಥಳಗಳಲ್ಲಿ ಉತ್ಸವಗಳು ಏರ್ಪಟ್ಟಿದ್ದವು. ೧೯೩೭ರ ಮಾರ್ಚ್ ತಿಂಗಳಲ್ಲಿ ಇದರ ಸಮಾರೋಪ ನಡೆಯುವುದಿತ್ತು. ಜಯಂತಿ ಕಮಿಟಿಯ ಪ್ರಧಾನ ಸಂಚಾಲಕರಾದ ಸ್ವಾಮಿ ಸಂಬುದ್ಧಾನಂದರು ಭಾರತದೆಲ್ಲೆಡೆ ಸಂಚರಿಸಿ, ಜಯಂತ್ಯುತ್ಸವಗಳು ವಿಧ್ಯುಕ್ತವಾಗಿ ಜರಗುವಂತೆ ಬಹಳ ಶ್ರಮಿಸಿದರು. ಈ ದೇಶವ್ಯಾಪೀ ಉತ್ಸವದ ಹಿಂದೆ ಸ್ವಾಮಿ ಸಂಬುದ್ಧಾನಂದರ ಅವಿರತ ಶ್ರಮ ಹಾಗೂ ಸೇವಾತತ್ಪರತೆಯು ಎಲ್ಲರನ್ನೂ ಚಕಿತಗೊಳಿಸಿತು.

ಶತಮಾನೋತ್ಸವದ ಅಂಗವಾಗಿ ೧೯೩೭ರ ಜನವರಿ ೩೧ರಂದು ಸರ್ವಧರ್ಮ ಸಮನ್ವಯವನ್ನು ಸೂಚಿಸುವ ಮಹಾ ಮೆರವಣಿಗೆಯನ್ನು ಹೊರಡಿಸಲಾಗಿತ್ತು. ಇದರಲ್ಲಿ ಜಾತಿ, ಧರ್ಮ ಇತ್ಯಾದಿಗಳ ಯಾವುದೇ ಪರಿಧಿಯನ್ನಿಟ್ಟುಕೊಳ್ಳದೆ ಹಿಂದೂ, ಮುಸಲ್ಮಾನ್, ಕ್ರಿಶ್ಚಿಯನ್, ಪಾರ್ಸಿ, ಜೈನ ಮುಂತಾದ ಮತ, ಸಂಪ್ರದಾಯಗಳ ಸ್ತ್ರೀ-ಪುರುಷರು ಪಾಲ್ಗೊಂಡಿದ್ದರು. ಈ ಮೆರವಣಿಗೆಯು ಅಪರಾಹ್ನ ೧.೩೦ಕ್ಕೆ ದೇಶಬಂಧು ಪಾರ್ಕ್‌ನಿಂದ ಪ್ರಾರಂಭಗೊಂಡು ರಾಜಾ ದೀನೇಂದ್ರ ಸ್ಟ್ರೀಟ್, ಆರ್.ಜಿ.ಕರ್. ರೋಡ್, ಕಾರ್ನ್‌ವಾಲೀಸ್ ಸ್ಟ್ರೀಟ್, ಕಾಲೇಜ್ ಸ್ಟ್ರೀಟ್, ಬಹುಬಜಾರ್ ಸ್ಟ್ರೀಟ್, ಚಿತ್ತರಂಜನ್ ಅವಿನ್ಯೂ ಹಾಗೂ ಬೆಂಟಿಂಗ್ ಸ್ಟ್ರೀಟನ್ನು ಬಳಸಿ ಬಂದು, ಸಂಜೆ ೪ ಗಂಟೆಯ ಹೊತ್ತಿಗೆ ಮೈದಾನದ ಮಾನ್ಯುಮೆಂಟಿಗೆ ಬಂದು ತಲುಪಿತು. ಅಲ್ಲಿ ನಡೆದ ಮಹಾಸಭೆಯಲ್ಲಿ ಅಧ್ಯಾಪಕರಾದ ವಿನಯ್ ಕುಮಾರ್ ಸರ್ಕಾರ್ ಮುಂತಾದವರು ಮಾತನಾಡಿದರು. ಬಹಳ ಇಚ್ಛೆಯಿದ್ದರೂ ಕಾರಣಾಂತರಗಳಿಂದ ಸ್ವಾಮಿ ವಿರಜಾನಂದರಿಗೆ ಈ ಮೆರವಣಿಗೆಯಲ್ಲಿ ಭಾಗವಹಿಸಲಾಗಲಿಲ್ಲ.

ದಕ್ಷಿಣ ಕೊಲ್ಕತ್ತೆಯ ಭವಾನಿಪುರದ ನಾರ್ದರ್ನ್ ಪಾರ್ಕ್‌ನಲ್ಲಿ ಶತಮಾನೋತ್ಸವದ ಅಂಗವಾಗಿ ಪ್ರದರ್ಶನವೊಂದನ್ನು

ಏರ್ಪಡಿಸಲಾಗಿತ್ತು (೧.೨.೧೯೩೭). ಇದು ಮುಖ್ಯವಾಗಿ ಭಾರತೀಯ ಧರ್ಮ, ಸಂಸ್ಕೃತಿ, ಚಿತ್ರಕಲೆ, ಕರಕುಶಲ ಕೈಗಾರಿಕೆ ಹಾಗೂ ಆರೋಗ್ಯದ ವಿಷಯಗಳನ್ನೊಳಗೊಂಡಿತ್ತು. ಕೊಲ್ಕತ್ತೆಯ ಮೇಯರ್ ಸರ್ ಹರಿಶಂಕರ್ ಪಾಲ್ ಒಟ್ಟಾರೆ ಪ್ರದರ್ಶನದ ಉದ್ಘಾಟನೆಯನ್ನು ಮಾಡಿದರು. ನ್ಯಾಯಾಧೀಶರಾದ ದ್ವಾರಕಾನಾಥ ಮಿತ್ರರಿಂದ ಕಲಾವಿಭಾಗವೂ, ನರಸೀಪುರದ ರಾಜನಾದ ಭೂಪೇಂದ್ರ ನಾರಾಯಣ ಸಿಂಹರಿಂದ ಆರೋಗ್ಯ ವಿಭಾಗವೂ, ಡಾ. ಸತ್ಯಚರಣ ಲಾಹಾರಿಂದ ಸಂಸ್ಕೃತಿ ವಿಭಾಗವೂ ಹಾಗೂ ಸಂತೋಷದ ಮಹಾರಾಣಿ ಹೇಮಾಂಗಿನಿ ರಾಯ್ ಚೌಧುರಿಯವರಿಂದ ಮಹಿಳಾ ವಿಭಾಗವೂ ಉದ್ಘಾಟನೆ ಮಾಡಲ್ಪಟ್ಟಿತು. ಈ ಪ್ರದರ್ಶನವು ಒಂದು ತಿಂಗಳವರೆಗೂ ನಡೆದು ಸಹಸ್ರಾರು ಸಂಖ್ಯೆಯ ಜನರನ್ನು ಆಕರ್ಷಿಸಿತು. ಅದರಲ್ಲಿ ಭಾರತೀಯ ಸಂಸ್ಕೃತಿಯ ಇತಿಹಾಸದ ಕ್ರಮವಿಕಾಸವನ್ನು ವಿಶೇಷವಾಗಿ ಪ್ರದರ್ಶಿಸಿದ್ದರು.

ಶ್ರೀರಾಮಕೃಷ್ಣರ ಜನ್ಮ ಶತಮಾನೋತ್ಸವದ ಉತ್ಸವ-ಆನಂದಗಳು ನಡೆಯುತ್ತಿದ್ದಾಗ ಹಠಾತ್ತಾಗಿ ದುಃಖದ ಛಾಯೆಯು ಕಂಡಿತು. ೧೯೩೭ರ ಫೆಬ್ರವರಿ ೫ರಂದು ಮಠಾಧ್ಯಕ್ಷರಾದ ಸ್ವಾಮಿ ಅಖಂಡಾನಂದರು ಸಾರಗಾಛಿಯಲ್ಲಿ ತುಂಬ ಅಸ್ವಸ್ಥರಾಗಿದ್ದಾರೆಂಬ ಸುದ್ದಿ ಬಂತು. ತಕ್ಷಣವೇ ಕೆಲವು ಸಂನ್ಯಾಸಿಗಳು ಬೇಲೂರು ಮಠದಿಂದ ಸಾರಗಾಛಿಗೆ ಹೊರಟು, ಮಾರನೇ ದಿನವೇ ಅಖಂಡಾನಂದರನ್ನು ಬೇಲೂರು ಮಠಕ್ಕೆ ಕರೆದುಕೊಂಡು ಬಂದರು. ಆದರೆ ಮಹಾರಾಜರು ೧೪ ಗಂಟೆಗಳ ಕಾಲ ಮಾತ್ರ ಬದುಕಿದ್ದರು. ಫೆಬ್ರವರಿ ೭ ರ ಭಾನುವಾರದಂದು ಅಪರಾಹ್ನ ೩ ಗಂಟೆ, ೭ ನಿಮಿಷಕ್ಕೆ ಅವರು ಮಹಾಸಮಾಧಿಯಲ್ಲಿ ಲೀನರಾಗಿ ತಮ್ಮ ನಶ್ವರ ದೇಹವನ್ನು ತ್ಯಜಿಸಿದರು. ಅವರ ಮುಖಮಂಡಲದಲ್ಲಿ ರೋಗ-ವೇದನೆಗಳ ಚಿಹ್ನೆ ಕಿಂಚಿತ್ತಾದರೂ ಇರಲಿಲ್ಲ ; ಅಪೂರ್ವ ಶಾಂತಿ, ಆನಂದಗಳು ಅಲ್ಲಿ ನೆಲೆಸಿದ್ದವು. ಗುರುಭಾಯಿಗಳಾದ ಸ್ವಾಮಿ ಅಭೇದಾನಂದರು ಅಖಂಡಾನಂದರ ಅಂತಿಮ ದರ್ಶನಕ್ಕೆಂದು ಬೇಲೂರು ಮಠಕ್ಕೆ ಬಂದು, ಸ್ವತಃ ತಾವೇ ಪ್ರಿಯ ಸಹೋದರನ ದೇಹವನ್ನು ಪುಷ್ಪ-ಮಾಲೆಗಳಿಂದ ಅಲಂಕರಿಸಿದರು. ರಾತ್ರಿ ೮.೩೦ರ ಹೊತ್ತಿಗೆ ಮಠದ ಪ್ರಾಂಗಣದಲ್ಲಿ ಸ್ವಾಮಿ ಪ್ರೇಮಾನಂದರ ಸಮಾಧಿಸ್ಥಾನದ ಪಕ್ಕದಲ್ಲೇ ಅಖಂಡಾನಂದರ ತಪಸ್ಸಿನಿಂದ ಪವಿತ್ರವಾದ ಶರೀರವು ಶ್ರೀಗಂಧದ ಕಟ್ಟಿಗೆಯಿಂದ ಪ್ರಜ್ವಲಿತವಾದ ಚಿತಾಗ್ನಿಯಲ್ಲಿ ಆಹುತಿಯಾಯಿತು.

ಪೂಜ್ಯ ಅಖಂಡಾನಂದರ ತಿರೋಧಾನದ ನಂತರ ಪೂಜ್ಯರಾದ ಸ್ವಾಮಿ ವಿಜ್ಞಾನಾನಂದರು ಶ್ರೀರಾಮಕೃಷ್ಣ ಮಠ ಹಾಗೂ ಮಿಷನ್ನಿನ ಅಧ್ಯಕ್ಷರಾಗಿಯೂ ಹಾಗೂ ಸ್ವಾಮಿ ಶುದ್ಧಾನಂದರು ಉಪಾಧ್ಯಕ್ಷರಾಗಿಯೂ ನೇಮಕಗೊಂಡರು. ಆದ್ದರಿಂದ ವಿರಜಾನಂದರು ಸೆಕ್ರೆಟರಿಯಾಗಿ ಉಳಿದುಕೊಳ್ಳಬೇಕಾಯಿತು. ಶ್ರೀರಾಮಕೃಷ್ಣರ ಜನ್ಮ ಶತಮಾನೋತ್ಸವದ ಅಂಗವಾಗಿ ಮಾರ್ಚ್ ೧ರಿಂದ ೮ರವರೆಗೆ ಕೊಲ್ಕತ್ತಾದ ಟೌನ್ ಹಾಲ್‌ನಲ್ಲಿ 'ವಿಶ್ವಧರ್ಮ ಮಹಾಸಮ್ಮೇಳನ'ವು ಜರುಗಿತು. ಪ್ರಪಂಚದ ಎಲ್ಲ ಧರ್ಮಗಳ ಪ್ರತಿನಿಧಿಗಳು ಭಾಗವಹಿಸಿದ್ದ ಈ ಸಮ್ಮೇಳನವು ಅಭೂತಪೂರ್ವವಾಗಿತ್ತು. ಇದರ ಬಹುಪಾಲು ಖ್ಯಾತಿಯು ಅಧ್ಯಾಪಕರಾದ ವಿನಯಕುಮಾರ್ ಸರ್ಕಾರ್ ಅವರಿಗೆ ಸೇರಬೇಕಾದುದು. ಟೌನ್ ಹಾಲ್ ತಳಿರುತೋರಣ, ಪುಷ್ಪ-ಪತಾಕೆಗಳಿಂದ ಬಹಳ ಚೆನ್ನಾಗಿ ಅಲಂಕೃತವಾಗಿತ್ತು. ಅಲ್ಲಲ್ಲಿ ವಿಭಿನ್ನ ಸಂಪ್ರದಾಯದವರೆಲ್ಲರಿಗೂ ಅನ್ವಯಿಸುವಂತಹ ನುಡಿಗಟ್ಟುಗಳನ್ನೂ, ವಿವಿಧ ಧರ್ಮದ ಲಾಂಛನಗಳನ್ನೂ ತೂಗುಹಾಕಲಾಗಿತ್ತು. ಅಲ್ಲದೇ ವಿವಿಧ ಮಂದಿರಗಳ, ಮಠ-ತೀರ್ಥಸ್ಥಾನಗಳ ಚಿತ್ರಗಳು ಗೋಡೆಯನ್ನಲಂಕರಿಸಿದ್ದವು. ಭಾರತದ ಹಾಗೂ ವಿದೇಶಗಳ ಪ್ರಸಿದ್ಧ ವಿದ್ವಾಂಸರುಗಳು ಈ ಸಮ್ಮೇಳನದಲ್ಲಿ ಸಕ್ರಿಯವಾಗಿ ಭಾಗವಹಿಸಿದ್ದರು. ಬರಲಾಗದಿದ್ದ ಕೆಲವರು ತಮ್ಮ ತಮ್ಮ ಶುಭಹಾರೈಕೆಗಳನ್ನು ಕಳುಹಿಸಿದ್ದರು.[೧]

ಬೇರೆ ಬೇರೆ ಧರ್ಮದ ಪ್ರತಿನಿಧಿಗಳು ತಮ್ಮತಮ್ಮ ಧರ್ಮದ ಸಂಬಂಧವಾಗಿ ಭಾಷಣ ಮಾಡಿದರು. ಕೆಲವರು ಪ್ರಬಂಧಗಳನ್ನೋದಿದರು. ರಾಮಕೃಷ್ಣ ಸಂಘದ ಪರವಾಗಿ ಸ್ವಾಮಿ ವಿರಜಾನಂದರು ಕಳುಹಿಸಿದ ಸಂದೇಶವನ್ನು ಸ್ವಾಮಿ ನಿರ್ವೇದಾನಂದರು ಪ್ರಾರಂಭದ ಅಧಿವೇಶನದಲ್ಲಿ ಓದಿದರು. ಅದು ಹೀಗಿದೆ :

''ಈ ಮಹತ್ ಸಭೆಯಲ್ಲಿ ನೆರೆದಿರುವ ವಿವಿಧ ಧರ್ಮದ ಪ್ರತಿನಿಧಿಗಳ ದೃಶ್ಯವು ನಲ್ವತ್ತು ವರ್ಷಗಳಿಗೂ ಹಿಂದೆ ನಡೆದ ಐತಿಹಾಸಿಕ ಚಿಕಾಗೋ ಧರ್ಮ ಸಮ್ಮೇಳನವನ್ನು ನೆನಪಿಗೆ ತರು

---

೧ ಭಾರತದ ಆಗಿನ 'ಸೆಕ್ರೆಟರಿ ಆಫ್ ಸ್ಟೇಟ್' ಆಗಿದ್ದ ಲಾರ್ಡ್ ಜೆಟ್ ಲ್ಯಾಂಡ್‌ರವರು ಅಧ್ಯಕ್ಷರಿಗೆ ಪತ್ರವೊಂದನ್ನು ಬರೆದಿದ್ದರು. ಅದರಲ್ಲಿ ಹೀಗಿತ್ತು: ''ನಿಮ್ಮ ಅಧ್ಯಕ್ಷತೆಯಲ್ಲಿ ನಡೆಯುತ್ತಿರುವ ವಿಶ್ವಧರ್ಮ ಸಮ್ಮೇಳನದ ಸಾಫಲ್ಯವನ್ನು ಮನಸಾರೆ ಇಚ್ಛಿಸುತ್ತೇನೆ. ನಾನು ಬಂಗಾಳದಲ್ಲಿ ಇದ್ದಾಗ ರಾಮಕೃಷ್ಣ ಮಿಷನ್ನಿನ ಕಾರ್ಯಕರ್ತರು ಹಾಗೂ ಸಂನ್ಯಾಸಿಗಳೊಂದಿಗೆ ಬೆರೆಯುವಂತಹ ಅದೃಷ್ಟ ನನ್ನದಾಗಿತ್ತು. ಅದರ ನೆನಪು ಈಗಲೂ ನನ್ನ ಚಿತ್ತದಲ್ಲಿ ಹಸಿರಾಗಿಯೇ ಇದೆ. ರಾಮಕೃಷ್ಣ ಸಂಘದಿಂದ ಏರ್ಪಟ್ಟಿರುವ ಈ ಸಮ್ಮೇಳನವು ಸರ್ವತೋಭಾವದಲ್ಲಿ ಸಾರ್ಥಕತೆಯನ್ನು ಪಡೆಯುವುದು ಎನ್ನುವುದರಲ್ಲಿ ನನಗೆ ಸಂದೇಹವಿಲ್ಲ....''

ಬಂಗಾಳದ ಗವರ್ನರ್ ಆಗಿದ್ದ ಸರ್ ಜಾನ್ ಆ್ಯಂಡರ್‌ಸನ್ ಶುಭಾಶಯಗಳನ್ನು ಕೋರುತ್ತ ಹೀಗೆಂದು ತಮ್ಮ ಸಂದೇಶವನ್ನು ಕಳುಹಿಸಿದ್ದರು: ''ಶ್ರೀರಾಮಕೃಷ್ಣರಿಗೆ ಶ್ರದ್ಧಾಂಜಲಿಯನ್ನು ಅರ್ಪಿಸಲೆಂದು ಕೊಲ್ಕತ್ತೆಯಲ್ಲಿ ಈ ಮಹಾ ಸಮ್ಮೇಳನವು ಕರೆಯಲ್ಪಟ್ಟಿದೆ ಎಂಬುದನ್ನು ತಿಳಿದು ನನ್ನ ಮನದಲ್ಲಿ ಆಶಾಕಿರಣಗಳು ಉದಿಸಿವೆ. ಈ ಸಮ್ಮೇಳನದಲ್ಲಿ ಶ್ರೀರಾಮಕೃಷ್ಣರ ಆಂತರ್ಯದ ಭಾವನೆಗಳನ್ನು ಕುರಿತು ನೆರೆದಿರುವ ಪ್ರತಿನಿಧಿಗಳೊಂದಿಗೆ ಚರ್ಚಿಸಿದಲ್ಲಿ ಅವುಗಳನ್ನು ಕಾರ್ಯರೂಪಕ್ಕೆ ತರಲು ಸಹಾಯವಾಗುವುದು. ಧರ್ಮಗಳ ಸಮನ್ವಯ, ಪರಮತ ಸಹಿಷ್ಣುತೆ ಹಾಗೂ ಅಂತರ್ಜಾತೀಯ ಮೈತ್ರಿ ಇವುಗಳೇ ಶ್ರೀರಾಮಕೃಷ್ಣರ ಆದರ್ಶ.''

ಮಹಾತ್ಮಾ ಗಾಂಧೀಜಿಯವರು ತಂತಿಯ ಮೂಲಕ ಈ ಸಂದೇಶವನ್ನು ಕಳುಹಿಸಿದ್ದರು: ''ಸಮ್ಮೇಳನದ ಸಾಫಲ್ಯಕ್ಕಾಗಿ ಪ್ರಾರ್ಥಿಸುತ್ತೇನೆ. ಈ ಸಮ್ಮೇಳನದ ಮೂಲಕ ಮಹಾನ್ ಕಾರ್ಯಸಿದ್ಧಿಯಾಗುವುದೆಂದು ನಂಬುವೆ.'' ಕಾಕಾ ಕಾಲೇಲ್ಕರ್ ಅವರಿಗೆ ಗಾಂಧೀಜಿ ಹೀಗೆ ಪತ್ರ ಬರೆದಿದ್ದರು: ''ಪ್ರೀತಿಯ ಕಾಕಾ, ತಾವು ವಿಶ್ವಧರ್ಮ ಮಹಾಸಮ್ಮೇಳನದಲ್ಲಿ ಭಾಗ ವಹಿಸಲು ಹೋಗುತ್ತಿದ್ದೀರಿ. ಈ ಸಮ್ಮೇಳನವು ಮಹಾಪುರುಷರಾದ ಶ್ರೀ ರಾಮಕೃಷ್ಣರಿಗೆ ಸಂಬಂಧಿಸಿದೆ. ಅಲ್ಲಿನಡೆಯುವ ಚರ್ಚೆಯು ಸರ್ವಧರ್ಮಾನುಯಾಯಿಗಳಿಗೆ ಮಾರ್ಗದರ್ಶನ ಮಾಡಲು ಸಮರ್ಥವಾಗಲೆಂಬುದೇ ನನ್ನ ಬಯಕೆ.''

ತ್ತಿದೆ. ಹಿಂದೂಧರ್ಮದ ಮಹಾನ್ ಪ್ರಚಾರಕರಾದ ಸ್ವಾಮಿ ವಿವೇಕಾನಂದರು ತಮ್ಮ ಗುರುಗಳಾದ ಶ್ರೀರಾಮಕೃಷ್ಣರಿಂದ ಆಧ್ಯಾತ್ಮಿಕ ಉತ್ತರಾಧಿಕಾರ ರೂಪವಾಗಿ ಪಡೆದ 'ಸರ್ವಧರ್ಮ ಸಮನ್ವಯ' ಎಂಬ ಘೋಷಣೆಯನ್ನು ಈ ಸಮ್ಮೇಳನದಲ್ಲಿ ಮೊಳಗಿಸಿ ಇಡೀ ವಿಶ್ವವನ್ನೇ ಚಕಿತಗೊಳಿಸಿದರು. ಆ ಘೋಷಣೆಯನ್ನು ವಿಶ್ವದ ಮಾನವರು ಉತ್ಸಾಹ-ಆಗ್ರಹಗಳಿಂದ ಸ್ವೀಕರಿಸಿದ್ದರು. ಮಾನವರಲ್ಲಿ ಹೆಚ್ಚುತ್ತಿರುವ ಶಾಂತಿಪ್ರಿಯತೆ ಮತ್ತು ದಕ್ಷಿಣೇಶ್ವರದ ಮಹಿಮಾನ್ವಿತನು ತನ್ನ ಜೀವನದಲ್ಲಿ ಪ್ರತ್ಯಕ್ಷೀಕರಿಸಿಕೊಂಡ ಋಷಿ ಮುನಿಗಳ ಅತೀಂದ್ರಿಯ ಅನುಭೂತಿಗಳ ಬಗ್ಗೆ ಸಪ್ರೇಮ ಶ್ರದ್ಧೆಯೇ ಇದಕ್ಕೆ ಸಾಕ್ಷಿಯಾಗಿದೆ.

''ಈ ಸಂದೇಶದ ಘೋಷಣೆಯು ದೇಶದಿಂದ ದೇಶಕ್ಕೆ, ಜನಾಂಗದಿಂದ ಜನಾಂಗಕ್ಕೆ ಪ್ರಸಾರವಾಗುತ್ತ ಹೋಯಿತು. ಅತ್ಯಲ್ಪ ಸಮಯದಲ್ಲೇ ಜಗತ್ತಿನ ಪ್ರಸಿದ್ಧ ಮಹಾನ್ ಚಿಂತಕರು ಈ ಸಂದೇಶದ ಮಹತ್ವವನ್ನು ಅರಿತು ಜಗತ್ತಿನ ಹಿತಕ್ಕಾಗಿ ಮುಕ್ತಿಯ ಗಾನವನ್ನು ಮತ್ತೆ ಹಾಡಲನುವಾಗಿದ್ದನ್ನು ಕಂಡು ನಮ್ಮ ಹೃದಯ ಆನಂದದಿಂದ ತುಂಬಿಹೋಗಿದೆ. ಅಲ್ಲದೇ ಪರಸ್ಪರ ಸಹಾನುಭೂತಿ ಹಾಗೂ ಧರ್ಮದ ಸಾಮಂಜಸ್ಯದ ಮೂಲಕ ಶಾಂತಿ ಮೈತ್ರಿಗಳಿಂದ ಕೂಡಿದ ಹೊಸ ಯುಗವೊಂದನ್ನು ಸೃಷ್ಟಿಸುವ ಉದ್ದೇಶದಿಂದ ಇಲ್ಲಿ ನೆರೆದಿದ್ದಾರೆ.

''ಜಡವಾದದ ಅಂಧಾನುಕರಣೆ ಮಾನವ ಜೀವನ ಮತ್ತು ಸಂಸ್ಕೃತಿಯ ತಳಹದಿಯನ್ನೇ ಅಲುಗಾಡಿಸಲು ಅನುವಾಗಿರುವ ಈ ಸಮಯದಲ್ಲಿ ವಿವಿಧ ಚಿಂತನಧಾರೆಯ ಸಮರ್ಥರು ತಮ್ಮ ತಮ್ಮೊಳಗೇ ವಿಚಾರ ವಿನಿಮಯ ಮಾಡಿಕೊಂಡು ತನ್ಮೂಲಕ ಪರಸ್ಪರ ಪ್ರೀತಿ ಹಾಗೂ ಭದ್ರಬುನಾದಿ ಹಾಕಿ, ಸರ್ವಮತ-ವಿಶ್ವಾಸಗಳ ಒಂದು ಭ್ರಾತೃಸಂಘವನ್ನು ಸ್ಥಾಪನೆ ಮಾಡಲೋಸುಗ ಈ ಧರ್ಮ ಸಮ್ಮೇಳನದಲ್ಲಿ ನೆರೆದಿರುವುದು ಈ ಯುಗದ ಮಂಗಳಕ್ಕೆ ನಾಂದಿ ಎಂಬುದರಲ್ಲಿ ಸಂದೇಹವಿಲ್ಲ. ಈ ಸಮ್ಮೇಳನವು ಸರ್ವತೋಮುಖವಾಗಿ ಸಾರ್ಥಕವಾಗಲಿ ಎಂಬುದೇ ನಮ್ಮೆಲ್ಲರ ಏಕೈಕ ಕಾಮನೆ. ಪ್ರಪಂಚದ ಬೇರೆ ಬೇರೆ ಪ್ರಾಂತ್ಯಗಳಿಂದ ಬಂದಿರುವ ಬೇರೆಬೇರೆ ಧರ್ಮದ ನೇತಾರರನ್ನು ಇಲ್ಲಿ ಯಾವೊಂದು ಸಖ್ಯಭಾವವು ಒಂದುಗೂಡಿಸಿದೆಯೋ ಅದು ನಮ್ಮೆಲ್ಲರನ್ನೂ ಒಂದು ಘನವಾದ ಭ್ರಾತೃತ್ವದ ಬಂಧನದಲ್ಲಿ ಕಟ್ಟಿಹಾಕುವುದು ಎಂಬುದು ನಮ್ಮ ದೃಢ ವಿಶ್ವಾಸವಾಗಿದೆ.

''ಈ ಪ್ರೇಮ-ತರಂಗವು ದಿನಗಳೆದಂತೆ ಅಪಾರ ಶಕ್ತಿ, ವ್ಯಾಪಕತೆಯನ್ನು ಪಡೆಯಲಿ. ವಿಶ್ವದಲ್ಲಿ ಈಗಿರುವ ಸಂಘರ್ಷ ಹಾಗೂ ದ್ವಂದ್ವದ ಅಪಸ್ವರವನ್ನು ಶಾಶ್ವತವಾಗಿ ನಿವಾರಿಸಲಿ ಎಂಬುದೇ ನಮ್ಮ ವ್ಯಾಕುಲ ಪ್ರಾರ್ಥನೆ.

''ಯಾರ ಹೆಸರಿನಲ್ಲಿ ಈ ಸಮ್ಮೇಳನವು ನಡೆಯುತ್ತಿದೆಯೋ ಆ ರಾಮಕೃಷ್ಣರು ನಮಗೆಲ್ಲರಿಗೂ ಅವರ ಸಂದೇಶದ ಮರ್ಮವನ್ನು ಅರಿಯುವಂತಹ ಶಕ್ತಿಯನ್ನು ನೀಡಲಿ. ಅಷ್ಟೇ ಅಲ್ಲದೆ ಅದರ ತತ್ತ್ವಜ್ಞಾನದ ಸಂಪತ್ತನ್ನು ಮನೆಮನೆಗೂ ತಲುಪಿಸಿ ಮಾನವ ಜನತೆಗೆ ಶಾಂತಿಯ ಅಡಿಗಲ್ಲನ್ನು ಹಾಕಲು ಬೇಕಾದ ಸಾಮರ್ಥ್ಯವನ್ನು ನೀಡಲಿ. ಅವರ ಆಶೀರ್ವಾದವು ನಿಮ್ಮಗಳ ಮೇಲೆ ಸದಾ ಸರ್ವದಾ ವರ್ಷಿತವಾಗಲಿ!''

ಶ್ರೀರಾಮಕೃಷ್ಣ ಮಠ ಮತ್ತು ಮಿಷನ್ನಿನ ವತಿಯಿಂದ

**ಸ್ವಾಮಿ ವಿರಜಾನಂದ**

ಸೆಕ್ರೆಟರಿ

ಈ ಸಮ್ಮೇಳನದ ಪ್ರಾರಂಭಿಕ ಸಭೆಯು ಆಚಾರ್ಯರಾದ ವ್ರಜೇಂದ್ರನಾಥ ಸೀಲ್ ಅವರ ಅಧ್ಯಕ್ಷತೆಯಲ್ಲಿ ನಡೆಯಿತು. ಮನ್ಮಥನಾಥ ಮುಖ್ಯೋಪಾಧ್ಯಾಯರು ಸ್ವಾಗತ ಸಮಿತಿಯ ಅಧ್ಯಕ್ಷರಾಗಿದ್ದರು. ಸಮ್ಮೇಳನದ ಎರಡನೇ ಸಭೆಯು ಮಾರ್ಚ್ ೨ ರಂದು ಬೆಳಗ್ಗೆ ೮ ಗಂಟೆಗೆ ಪ್ರಾರಂಭವಾಯಿತು. ಕೊಲ್ಕತ್ತೆಯಲ್ಲಿ ಚೈನಾದ ಕೌನ್ಸೆಲ್ ಜನರಲ್ ಆದ ಸಿ. ಎಲ್. ಚನ್ ಎಂಬುವರು ಅಧ್ಯಕ್ಷ ಸ್ಥಾನವನ್ನು ಅಲಂಕರಿಸಿದ್ದರು. ಅಂದು ಹೈದರಾಬಾದಿನ ನಿಜಾಮರಾದ ಬಹಾದೂರರ ಸಂದೇಶವನ್ನು ಸಭೆಯಲ್ಲಿ ಓದಲಾಯಿತು. ಅದರ ಒಂದಂಶ ಇಲ್ಲಿದೆ:

''ಯಾವ ಮಹಾಪುರುಷನು ತನ್ನ ನಿಜಜೀವನದಲ್ಲಿ ಉದಾರ ಉಚ್ಚತಮ ಸಮೂಹಗಳನ್ನು ಪ್ರತ್ಯಕ್ಷೀಕರಿಸಿಕೊಂಡು, ಸರ್ವಧರ್ಮ ಸಹಿಷ್ಣುತೆಯನ್ನು ಇಡೀ ಪ್ರಪಂಚಕ್ಕೆ ತೋರಿ ಹೋದನೋ ಯಾರ ಈ ಸಂದೇಶವನ್ನು ಧರ್ಮ ಸಮ್ಮೇಳನದಲ್ಲಿ ಪ್ರಚಾರ ಮಾಡಲು ತಾವುಗಳು ಪ್ರಯತ್ನಿಸುತ್ತಿರುವಿರೋ, ಅಂತಹ ಮಹಾಪುರುಷರ ಶತಮಾನೋತ್ಸವದ ಸಂದರ್ಭದಲ್ಲಿ ಶ್ರದ್ಧಾಪೂರ್ವಕವಾಗಿ ತಲೆಬಾಗಿ ನನ್ನ ಸಹ-ಅನುಭೂತಿಯನ್ನು ತಿಳಿಸುತ್ತ ಉತ್ಸಾಹದಿಂದ ಈ ಸಂದೇಶವನ್ನು ಕಳುಹಿಸುತ್ತಿರುವೆ....''

ಅದೇ ದಿನ ಸಂಜೆ ಸಮ್ಮೇಳನದ ೩ನೇ ಸಭೆ ಸ್ವಾಮಿ ಅಭೇದಾನಂದರ ಅಧ್ಯಕ್ಷತೆಯಲ್ಲಿ ನಡೆಯಿತು. ಸಭೆಯಲ್ಲಿ ಪಾಶ್ಚಾತ್ಯ ಚಿಂತಕ ರೋಮಾ ರೋಲಾರ ಸಂದೇಶವನ್ನು ಓದಲಾಯಿತು :

''ಚಿಂತನೆಗಳ ಮೂಲಕ ನಾನು ನಿಮ್ಮೆಲ್ಲರೊಡನೆ ಯುಕ್ತವಾಗಿಯೇ ಇರುವೆ ಎಂಬುದರಲ್ಲಿ ಸಂದೇಹವಿಲ್ಲ. ಧರ್ಮ ಸಮ್ಮೇಳನದ ಬಗ್ಗೆ ನನಗಿರುವ ಸಹಭಾಗಿತ್ವವನ್ನೂ ನನ್ನ ಆಂತರಿಕ ಶುಭ ಕಾಮನೆಗಳನ್ನೂ, ಶ್ರದ್ಧಾಪೂರ್ವಕ ಅಭಿನಂದನೆಗಳನ್ನೂ ದಯವಿಟ್ಟು ಸರ್ವರಿಗೂ ತಿಳಿಯಪಡಿಸಿ. ಮಾನವನ ಜೀವನದಲ್ಲಿ ಪರಸ್ಪರ ಸೌಹಾರ್ದವನ್ನು ತರಲು ವಿವಿಧ ಧರ್ಮಗಳ ಸಾಮರಸ್ಯವನ್ನು ನಾನು ಜೀವನಪರ್ಯಂತ ಬಯಸುತ್ತಲೇ ಇದ್ದೆ. ಪ್ರೇಮಾವತಾರ ಶ್ರೀರಾಮಕೃಷ್ಣರ ಹೆಸರಿನಲ್ಲಿ ವಿಶ್ವಮೈತ್ರಿಯ ಪ್ರತೀಕವಾದ ಧರ್ಮ ಸಮ್ಮೇಳನವು ಸೇರುತ್ತಿರುವುದು ನನಗೆ ಅತ್ಯಂತ ಸಂತೋಷದ ಸಂಗತಿ. ಸಮ್ಮೇಳನದ ಪ್ರತಿನಿಧಿಗಳು ವಿಶ್ವ-ಮಾನವರ ಕಲ್ಯಾಣಕ್ಕಾಗಿ ಪ್ರಯತ್ನಿಸಬೇಕು ಎಂಬುದೇ ನನ್ನ ಕಳಕಳಿಯ ಮನವಿ. ಸಹಿಸಲಸಾಧ್ಯವಾದ ಕಿರುಕುಳ, ಖಂಡನೆ ಮತ್ತು ಅಪಮಾನಕ್ಕೊಳ

ಗಾದ ಶೋಷಿತರ ಅಭ್ಯುದಯಕ್ಕಾಗಿ ಈಗ ಬಹಳಷ್ಟು ಪ್ರಯತ್ನಗಳು ನಡೆಯುತ್ತಿವೆ. ನಾವೆಲ್ಲರೂ ಸಾಮಾಜಿಕ ನ್ಯಾಯದ ಸ್ಥಾಪನೆಗೆ ನೆರವಾಗುವಂತಾಗಲಿ. ಅಪಾರ ಪರಿಶ್ರಮದಿಂದ ದುಡಿದು ಕಣ್ಮರೆಯಾಗುವ ದರಿದ್ರರ, ನಿಸ್ಸಹಾಯಕರ ಸನಿಹದಲ್ಲೇ ನಮ್ಮ ಸ್ಥಾನವು ಸದಾ ಇರಲಿ.''

ಮಾರ್ಚ್ ೩ರಂದು ಬೆಳಗಿನ ಅಧಿವೇಶನವು ಕಾಕಾ ಕಾಲೇಲ್ಕರ್ ರವರ ಅಧ್ಯಕ್ಷತೆಯಲ್ಲಿ ನಡೆಯಿತು. ಸಂಜೆಯ ಅಧಿವೇಶನವು ಕಾಲೇಜ್ ಸ್ಕ್ವೇರ್‌ನಲ್ಲಿರುವ ಯೂನಿವರ್ಸಿಟಿ ಇನ್ಸ್ಟಿಟ್ಯೂಟ್ ಹಾಲ್ ನಲ್ಲಿ ನಡೆಯಿತು; ಅಧ್ಯಕ್ಷರಾಗಿದ್ದವರು ವಿಶ್ವಕವಿ ರವೀಂದ್ರನಾಥ ಠಾಕೂರ್ ಅವರು.

ಮುಂದಿನ ಅಧಿವೇಶನಗಳಲ್ಲಿ ಅಧ್ಯಕ್ಷರಾದವರು ಇವರು:

**ಮಾರ್ಚ್ ೪ ಬೆಳಿಗ್ಗೆ :** ಸ್ವಾಮಿ ಪರಮಾನಂದರು
*(ಇವರು ಬಾಸ್ಟನ್ ಹಾಗೂ ಲಾಕ್ರೆಸೆಂಟಾ ವೇದಾಂತ ಕೇಂದ್ರಗಳ ಅಧ್ಯಕ್ಷರಾಗಿದ್ದರು)*
**ಸಂಜೆ :** ಸರ್ ಫ್ರಾನ್ಸಿಸ್ ಯಂಗ್ ಹಸ್ಬೆಂಡ್

**ಮಾರ್ಚ್ ೫ ಬೆಳಿಗ್ಗೆ :** ಪ್ರೊಫೆಸರ್ ಮೊಹಮ್ಮದ್ ಆಲಿ ಸಿರಾಜಿ
*(ಇರಾನಿನ ಇವರು ಕೊಲ್ಕತ್ತೆಯ ವಿಶ್ವವಿದ್ಯಾಲಯದಲ್ಲಿ ಪ್ರೊಫೆಸರ್)*
**ಸಂಜೆ :** ಡಾ. ಡಿ. ಆರ್. ಭಂಡಾರ್ಕರ್
*(ಸಂಸ್ಕೃತ ಪಂಡಿತರು ಮತ್ತು ಭಾರತದ ಚರಿತ್ರೆ ಮತ್ತು ಸಂಸ್ಕೃತಿಯ ಪ್ರಾಧ್ಯಾಪಕರು)*[೨]

**ಮಾರ್ಚ್ ೬ ಬೆಳಿಗ್ಗೆ :** ವಾರಾಣಸಿಯ ಹಿಂದೂ ವಿಶ್ವವಿದ್ಯಾಲಯದ ಪಂಡಿತ ಪ್ರಮಥನಾಥ ತರ್ಕಭೂಷಣ
**ಸಂಜೆ :** ಸಂಗೀತ ವಿದುಷಿಯೂ, ರಾಷ್ಟ್ರನಾಯಕಿಯೂ ಆದ ಶ್ರೀಮತಿ ಸರೋಜಿನಿ ನಾಯ್ಡು

**ಮಾರ್ಚ್ ೭ ಬೆಳಿಗ್ಗೆ:** ಅರ್ಜಂಟೀನಾದ ಮೇಡಮ್ ಗುಯ್ರಾಡೆಸ್
**ಸಂಜೆ :** ವಾರಾಣಸಿಯ ಮಂಡಲೇಶ್ವರ ಸ್ವಾಮಿ ಭಾಗವತಾನಂದ ಗಿರಿ

**ಮಾರ್ಚ್ ೮ ಬೆಳಿಗ್ಗೆ:** ಕೊಲ್ಕತ್ತೆಯಲ್ಲಿ ಜೆಕೋಸ್ಲಾವಾಕಿಯಾದ ಕೌನ್ಸೆಲರ್ ಆದ ಡಾ. ಎಫ್. ವಿ. ಟೌಸೆಕ್
**ಸಂಜೆ :** ವಾರಾಣಸಿ ಹಿಂದೂ ವಿಶ್ವವಿದ್ಯಾನಿಲಯದ ಪ್ರೊ. ಎ. ಬಿ. ಧ್ರುವ.

ಶ್ರೀರಾಮಕೃಷ್ಣರ ವರ್ಷವ್ಯಾಪಿ ಶತಮಾನೋತ್ಸವಗಳು ಮಾರ್ಚ್ ೧೪ರಂದು ಶ್ರೀರಾಮಕೃಷ್ಣರ ಜಯಂತಿಯಂದು ಆರಂಭವಾಗಿ, ಎಂಟು ದಿನಗಳ ಕಾಲ ನಡೆದು ಸಮಾರೋಪಗೊಂಡವು. ಈ ಉತ್ಸವದಲ್ಲಿ ಬೊಂಬಾಯಿ, ಮದ್ರಾಸು, ಮೈಸೂರು, ಗುಜರಾತ್, ಪಂಜಾಬ್, ಉತ್ತರಪ್ರದೇಶ, ಬಿಹಾರ್, ಒಡಿಸ್ಸಾ, ಆಸ್ಸಾಂ ಹಾಗೂ ಬಂಗಾಳದ ವಿವಿಧ ಪ್ರಾಂತ್ಯಗಳಿಂದ ಅನೇಕ ಸಾಧು-ಸಂನ್ಯಾಸಿಗಳೂ, ಭಕ್ತರೂ ಬೇರೆ ಬೇರೆ ಸಂಪ್ರದಾಯದ ಪ್ರತಿಷ್ಠಿತ ಸ್ತ್ರೀ-ಪುರುಷರೂ ಭಾಗವಹಿಸಿದ್ದರು. ಮಠದ ಸೆಕ್ರೆಟರಿಯಾದ್ದರಿಂದ ವಿರಜಾನಂದರು ಎಲ್ಲ ಅತಿಥಿ-ಅಭ್ಯಾಗತರನ್ನು ನೋಡಿಕೊಳ್ಳುವುದರಲ್ಲಿ ನಿರತರಾಗಿದ್ದರೂ, ನಿಯಮಿತ ಜಪ-ಧ್ಯಾನವನ್ನು ಅತ್ಯಂತ ಶ್ರದ್ಧೆಯಿಂದ ಮುಂದುವರೆಸಿಕೊಂಡು ಹೋಗುತ್ತಿದ್ದರು. ಶ್ರೀರಾಮಕೃಷ್ಣರ ಜನ್ಮದಿನಕ್ಕೆ ಎರಡು ದಿನ ಮೊದಲು ಶಿವರಾತ್ರಿ ಯಂದು ರಾತ್ರಿ ೮ರಿಂದ ಹಿಡಿದು ಮಧ್ಯ ರಾತ್ರಿ ೧ ಗಂಟೆಯವರೆಗೆ ಏಕಾಸನದಲ್ಲಿ ಕುಳಿತು ಧ್ಯಾನಸ್ಥರಾಗಿದ್ದರು.

ಶತಮಾನೋತ್ಸವ ಸಮಾರೋಪದ ಮೊದಲು ಮತ್ತು ಅನಂತರ ಸಂಘದ ಸಂನ್ಯಾಸಿಗಳ ಸಭೆ ಸೇರಿತ್ತು. ಈ ಎರಡೂ ಸಭೆಗಳಲ್ಲಿ ವಿರಜಾನಂದರು ತಮ್ಮ ಸ್ವಲಿಖಿತ ಭಾಷಣಗಳನ್ನು ಓದಿದ್ದರು. ಇವುಗಳಿಂದ ಅವರ ಘನ ಆಲೋಚನಾ ಸಾಮರ್ಥ್ಯ, ವಿವೇಕಾನಂದರು ಹಾಕಿಕೊಟ್ಟ ಕರ್ಮಪಥದಲ್ಲಿ ಅವರಿಗೆ ಇದ್ದಂತಹ ದೃಢ ವಿಶ್ವಾಸ ಮತ್ತು ಬೆಳೆಯುತ್ತಿರುವ ಸಂಘದ ಬಗ್ಗೆ ಅವರಿಗೆ ಇದ್ದಂತಹ ಕಾಳಜಿಯು ಎದ್ದು ತೋರುತ್ತದೆ. ಮಾರ್ಚ್ ೧೧ರಂದು ಅವರು ನೀಡಿದ ಭಾಷಣದ ಒಂದಂಶವು ಹೀಗಿದೆ :

''ಪ್ರಭುವೇ ತನ್ನ ಕೆಲಸವನ್ನು ಮಾಡುತ್ತಿದ್ದಾನೆ ಮತ್ತು ಮುಂದೆಯೂ ಮಾಡಿಕೊಂಡು ಹೋಗುತ್ತಾನೆ. ಆದರೆ ಸಂಸಾರವನ್ನು ತ್ಯಜಿಸಿ ಬಂದು ಅವನ ಪತಾಕೆಯಡಿಯಲ್ಲಿ ನಿಂತು, ಅವನ ಕಾರ್ಯಕ್ಕೆ ಜೀವನವನ್ನೇ ಸಮರ್ಪಿಸಿಕೊಂಡಿರುವ ನಮ್ಮೆಲ್ಲರ ಆದ್ಯ ಕರ್ತವ್ಯವೇನೆಂದರೆ ಪ್ರಜ್ವಲಿಸುತ್ತಿರುವ ಈ ಆಧ್ಯಾತ್ಮಿಕ ಅಗ್ನಿ ಯಾವುದೇ ಕಾರಣಕ್ಕೆ ನಂದಿಹೋಗದಂತೆ ನೋಡಿಕೊಳ್ಳುವುದೇ ಆಗಿದೆ. ತ್ಯಾಗ ಮತ್ತು ಸೇವೆಯ ಮಹಾನ್ ಆದರ್ಶದ ಪಥದಲ್ಲಿ ನಾವು ಉಕ್ಕುವ ಉತ್ಸಾಹದಿಂದ ಮುಂದುವರಿಯಬೇಕಾಗಿದೆ. ನಾವು ದೀನ-ದುರ್ಬಲರೇ ಆಗಿರಬಹುದು. ಆದರೆ ಪ್ರಭುವು ಸರ್ವದಾ ನಮ್ಮ ಬೆನ್ನ ಹಿಂದೆಯೇ ಇದ್ದಾನೆ. ಆತನಲ್ಲಿ ವಿಶ್ವಾಸ ಇರಿಸಿದರೆ ಆತನೇ ನಮಗೆ ಶಕ್ತಿ-ಸಾಮರ್ಥ್ಯಗಳನ್ನು ನೀಡುವನು. ಆದ್ದರಿಂದ ಹೇ ಭಗವಂತನ ಸೈನಿಕರೇ! ಹಿಂತಿರುಗಿ ನೋಡುವ ಅಗತ್ಯವಿಲ್ಲ; ಶರೀರ ಮತ್ತು ಅದರ ಸುಖದ ಬಗ್ಗೆ ಲೇಶಮಾತ್ರವೂ ಗಮನ ಕೊಡದೆ, ಅಷ್ಟೇ ಏಕೆ, ನಿಜಮುಕ್ತಿಯನ್ನೂ ಸಹ ಬದಿಗೊತ್ತಿ ಮುಂದೆ ನಡೆಯಿರಿ. ಮುಂದೆ ಯಾವುದಾದರೂ ಜನ್ಮದಲ್ಲಿ ಮುಕ್ತಿಗೆ ಪ್ರಯತ್ನಿಸೋಣ; ಆದರೆ ಈ ಜನ್ಮವು ಮೃತ್ಯುವಿಗಾಗಿ, ಹೆಚ್ಚೇನು, ಅಗತ್ಯಬಿದ್ದರೆ ನರಕಕ್ಕೆ ಹೋಗಲೂ ಸಹ ಸಿದ್ಧವಿದ್ದು, ಆತನ ಕೆಲಸಕ್ಕಾಗಿ ಈ ಜನ್ಮವನ್ನು ಮುಡಿಪಾಗಿಡಿ. ಹೀಗೆ ಮಾಡಲಾಗದಿದ್ದರೆ ಆತನ ಹೆಸರನ್ನು ಉಚ್ಚರಿಸಲೂ ಸಹ ನಾವು ಯೋಗ್ಯರಲ್ಲ. ಮಾನವನ ಇತಿಹಾಸದಲ್ಲೇ ಅಪೂರ್ವವಾದ ಒಂದು ಆಧ್ಯಾ

---

೨ ಈ ಅಧಿವೇಶನಕ್ಕೆ ಮದನ ಮೋಹನ ಮಾಳವೀಯರು ಅಧ್ಯಕ್ಷರಾಗಬೇಕಿತ್ತು . ಆದರೆ ದೈಹಿಕ ಅನಾರೋಗ್ಯದಿಂದಾಗಿ ಅವರಿಗೆ ಬರಲಾಗಲಿಲ್ಲ. ಆದ್ದರಿಂದ ಅವರು ಕಾಶಿಯಿಂದ ತಂತಿಯೊಂದನ್ನು ಕಳುಹಿಸಿದ್ದರು : ''... ಪರಮಹಂಸರ ಪುಣ್ಯಸ್ಮೃತಿಯ ಶ್ರದ್ಧಾಂಜಲಿಯನ್ನು ಅರ್ಪಿಸುತ್ತಿದ್ದೇನೆ. ಮಾನಸಿಕವಾಗಿ ನಾನು ನಿಮ್ಮೊಂದಿಗಿದ್ದೇನೆ.''

ತ್ಮಿಕ ಚೇತನವನ್ನು ಜಾಗೃತಗೊಳಿಸಿ, ಭಾವವಿಪ್ಲವವನ್ನು ತರಲು ಶ್ರೀರಾಮಕೃಷ್ಣರು ಯಾರಿಗೆ ತಮ್ಮ ಸಕಲ ಶಕ್ತಿಯನ್ನೂ ಧಾರೆಯೆರೆದಿದ್ದರೋ, ಯಾರು ಶ್ರೀರಾಮಕೃಷ್ಣರ ಅಪರಮೂರ್ತಿಯೋ ಮತ್ತು ಆತ್ಮಸ್ವರೂಪರೋ ಅಂತಹ ಪೂಜ್ಯ ವಿವೇಕಾನಂದರಿಂದ ಸ್ಥಾಪಿತವಾದ ಸಂನ್ಯಾಸೀ ಸಂಘದ ಹೆಸರನ್ನು ಉಚ್ಚರಿಸಲೂ ಸಹ ನಾವು ಯೋಗ್ಯರಲ್ಲ.

''ನಮ್ಮ ಸಮಾಜದಲ್ಲಿ ಈಗಿರುವ ಅತಿದೊಡ್ಡ ಸಮಸ್ಯೆಯೆಂದರೆ ಅಸ್ಪೃಶ್ಯತೆ. 'ಮುಟ್ಟಬೇಡ, ಮುಟ್ಟಬೇಡ' ನೀತಿಯನ್ನೂ, ಧರ್ಮವನ್ನು ಅಡುಗೆ ಮನೆಗೆ ಸರಿಸಿರುವುದನ್ನೂ ಸ್ವಾಮೀಜಿಯವರು ತೀವ್ರವಾಗಿ ಖಂಡಿಸಿದ್ದಾರೆ. ಈ ದಿಕ್ಕಿನಲ್ಲಿ ನಾವು ಮಾಡುವುದು ಬಹಳಷ್ಟಿದೆ. ಇಲ್ಲಿ ನಾವು ನೆನಪಿನಲ್ಲಿಡಬೇಕಾಗಿರುವುದೇನೆಂದರೆ ಕೆಳಜಾತಿಯವರ ಆರ್ಥಿಕ ಸ್ಥಿತಿಯನ್ನು ಉತ್ತಮಪಡಿಸುವುದು ಮತ್ತು ಉತ್ತಮ ಶಿಕ್ಷಣ ನೀಡುವುದು. ಆಗ ಮಾತ್ರವೇ ನಾವು ಈ ವಿಷಯಗಳಲ್ಲಿ ಆಮೂಲಾಗ್ರವಾಗಿ ಬದಲಾವಣೆಗಳನ್ನು ತರಬಹುದು. ಏಕೆಂದರೆ 'ಶಿಕ್ಷಣದ ಜಾದೂ ಸ್ಪರ್ಶದಿಂದ ಪರಿಹರಿಸಲಾಗದ ಯಾವುದೇ ಸಮಸ್ಯೆಯೂ ದೇಶದಲ್ಲಿಲ್ಲ' ಎಂದು ಸ್ವಾಮೀಜಿಯವರು ಹೇಳುತ್ತಿದ್ದುದು ತಿಳಿದೇ ಇದೆ.

''ಕೆಳವರ್ಗದ ಸೋದರರೊಂದಿಗೆ ನಾವು ನಾಯಿ ಬೆಕ್ಕುಗಳೊಂದಿಗೆ ವರ್ತಿಸುವುದಕ್ಕಿಂತ ಕೀಳಾಗಿ ವರ್ತಿಸುತ್ತಿರುವುದನ್ನು ಕಂಡು ಅವರಲ್ಲನೇಕರು ಹಿಂದೂಧರ್ಮವನ್ನು ಬಿಟ್ಟು ಹೋಗುತ್ತಿದ್ದಾರೆ. ಇದರಿಂದಾಗಿ ಹಿಂದೂ ಸಮಾಜವು ದಿನದಿಂದ ದಿನಕ್ಕೆ ದುರ್ಬಲವಾಗುತ್ತಿದೆ. ಹಿಂದೂಧರ್ಮವನ್ನು ಬಿಟ್ಟು ಬೇರೆ ಧರ್ಮಗಳಿಗೆ ಮತಾಂತರ ಹೊಂದುತ್ತಿರುವುದಕ್ಕೆ ಇರುವ ಮತ್ತೊಂದು ಕಾರಣವೆಂದರೆ, ಆರ್ಥಿಕ ಲಾಭ. ಜನರು ಧರ್ಮಕ್ಕಾಗಿ ಅಲ್ಲ; ಆರ್ಥಿಕ ಹಾಗೂ ಸಾಮಾಜಿಕ ಸೌಲಭ್ಯಗಳಿಗಾಗಿಯೇ ಪರಧರ್ಮವನ್ನವಲಂಬಿಸುತ್ತಿದ್ದಾರೆ ಎಂಬುದು ನಮ್ಮ ಸಮಾಜದ ಚಿಂತಾಜನಕ ಸ್ಥಿತಿಯನ್ನು ತೋರುತ್ತದೆ. ಹಿಂದೂಗಳು ಸುರಕ್ಷಿತರಾಗಿರಬೇಕಾದಲ್ಲಿ ಇವಕ್ಕೆಲ್ಲ ಇತಿಶ್ರೀ ಹಾಡಬೇಕಾಗಿದೆ. 'ಹಿಂದುವು ಇನ್ನೂ ಒಳ್ಳೆಯ ಹಿಂದುವಾಗಲಿ, ಮುಸಲ್ಮಾನನು ಇನ್ನೂ ಒಳ್ಳೆಯ ಮುಸಲ್ಮಾನನಾಗಲಿ, ಕ್ರೈಸ್ತನು ಇನ್ನೂ ಒಳ್ಳೆಯ ಕ್ರೈಸ್ತನಾಗಲಿ' ಎಂದು ಸ್ವಾಮೀಜಿಯವರು ಹೇಳಿದ್ದರೂ ಸಹ, ಧರ್ಮಾನುಷ್ಠಾನಕ್ಕಲ್ಲದೇ ಬೇರೆ ಉದ್ದೇಶಗಳಿಂದ ಸ್ವಧರ್ಮವನ್ನು ತ್ಯಜಿಸುವುದು ಅವರಿಗೆ ನೋವು ತರುತ್ತಿತ್ತು.

''ಜನಸಾಮಾನ್ಯರಲ್ಲಿ ಧರ್ಮ ಪ್ರಚಾರ ಮಾಡುವುದರ ಮೂಲಕ, ಹಿಂದೂ ಸಮಾಜದಲ್ಲಿ ಮತಾಂತರವನ್ನು ತಡೆಗಟ್ಟಬಹುದು. ಜನಸಾಧಾರಣರ ಮನಮುಟ್ಟುವಂತೆ ಉಪನ್ಯಾಸ ಮಾಡುವುದರಿಂದ, ಹರಿಕಥೆಗಳ ಮೂಲಕ ಸಮಾಜದಲ್ಲಿ ಧರ್ಮವನ್ನು ಹರಡಬಹುದಾಗಿದೆ. ಹಿಂದೆ ಸಮಾಜದಲ್ಲಿ ಧಾರ್ಮಿಕ-ಭಾವನೆಗಳನ್ನು ಯಾವುದು ಜಾಗೃತಗೊಳಿಸುತ್ತಿತ್ತೋ ಅಂತಹ ರಾಮಾಯಣ ಗಾಯನ, ಬಯಲಾಟ ಮುಂತಾದವುಗಳು ಪಾಶ್ಚಾತ್ಯ ಶಿಕ್ಷಣದ ಪರಿಣಾಮವಾಗಿ ಕಣ್ಮರೆಯಾಗುತ್ತಿರುವುದು ನಮ್ಮೆಲ್ಲರ ದೌರ್ಭಾಗ್ಯ. ಇವುಗಳಿಗೆಲ್ಲ ಹೆಚ್ಚು ಒತ್ತುಕೊಟ್ಟು ನವಚೇತನ ತುಂಬುವುದು ಅವಶ್ಯವಾಗಿದೆ. ಹೀಗೆ ಮಾಡುವುದರಿಂದ ಹಿಂದೂಧರ್ಮ ಪ್ರತಿಪಾದಿಸುವ ವಿಷಯಗಳಾವುವು ಎಂಬುದು ಜನ ಸಾಮಾನ್ಯರಿಗೆ ತಿಳಿಯುತ್ತದೆ.

''ಮಕ್ಕಳಿಗೆ ಧಾರ್ಮಿಕ ಶಿಕ್ಷಣ ನೀಡುವುದು ಅತ್ಯಗತ್ಯ. ಈಗಿನ ಕಾಲದ ಶಿಕ್ಷಣ ವಿಧಾನವು ಧರ್ಮದ ಬಗ್ಗೆ ದ್ವೇಷವನ್ನು ಹುಟ್ಟಿಸುತ್ತಿದೆ. ಧರ್ಮವಿಹೀನ ಶಿಕ್ಷಣವು ಶಿಕ್ಷಣವೇ ಅಲ್ಲ. ಆ ರೀತಿಯ ಶಿಕ್ಷಣದಿಂದ ಅವರು ವಿಶ್ವವಿದ್ಯಾಲಯಗಳ ಪದವಿಗಳನ್ನು ಪಡೆಯಬಹುದು. ಆದರೆ ದೇಶ ಹಾಗೂ ಸಮಾಜದ ಬಗ್ಗೆ ಕರ್ತವ್ಯಹೀನರಾಗುವ ಸಂಭವವೇ ಹೆಚ್ಚು.

''ಯಥಾರ್ಥವಾದ ಧರ್ಮಶಿಕ್ಷಣವನ್ನು ನೀಡಲು ಯಥಾರ್ಥವಾದ ಧಾರ್ಮಿಕ ಜೀವನವನ್ನು ನಡೆಸಿದವರೇ ಆಗಬೇಕು. ಏಕೆಂದರೆ ಅಂಥವರ ಜೀವನವೇ ಇತರರ ಜೀವನವನ್ನು ದೀಪ್ತಗೊಳಿಸಲು ಸಾಧ್ಯ. ಸದ್ಧಾರ್ಮಿಕ ವ್ಯಕ್ತಿಯು ಹೆಚ್ಚು ಮಾತನಾಡದೆಯೂ ಇತರರಿಗೆ ಧರ್ಮಪ್ರೇರಣೆಯನ್ನು ನೀಡಬಲ್ಲ. ಯಥಾರ್ಥ ಜೀವನದ ಅಭಾವವಿದ್ದಲ್ಲಿ ಧಾರ್ಮಿಕ ಶಿಕ್ಷಣ ನೀಡುವುದು ವ್ಯರ್ಥವೇ ಸರಿ. ಆದ್ದರಿಂದ ಈ ದಿಸೆಯಲ್ಲಿ ದುಡಿಯುತ್ತಿರುವ ನಮ್ಮ ಸೋದರರು ಮಕ್ಕಳಲ್ಲಿ ಧಾರ್ಮಿಕ ಭಾವನೆಯನ್ನು ಬಿತ್ತಲು ತಾವು ಅನುಸರಿಸಿ ಅವರಿಗೆ ಮಾದರಿಯಾಗಬೇಕೆಂಬುದೇ ನನ್ನ ಮನವಿ.''

ಸಂನ್ಯಾಸೀ ಸಮ್ಮೇಳನದ ಮತ್ತೊಂದು ಸಭೆಯಲ್ಲಿ (ಮಾರ್ಚ್ ೧೬) ನೀಡಿದ ಭಾಷಣದಲ್ಲಿ ವಿರಜಾನಂದರು ಈ ಕೆಳಗಿನ ವಿಷಯವನ್ನು ವಿಶದಪಡಿಸಿದರು :

''ಶ್ರೀರಾಮಕೃಷ್ಣರ ಜನ್ಮಶತಮಾನೋತ್ಸವವು ಇಡೀ ದೇಶದಲ್ಲೇ ಜರುಗಿದೆ, ಮತ್ತು ಈಗಲೂ ಜರುಗುತ್ತಿದೆ. ಶ್ರೀರಾಮಕೃಷ್ಣರ ಸಂದೇಶವು ದಶದಿಕ್ಕಿನಲ್ಲೂ ಪ್ರತಿಧ್ವನಿತವಾಗುತ್ತಿದೆ. ಈ ಉತ್ಸಾಹ ಹಾಗೂ ಉದ್ದೀಪನೆಯನ್ನು ತಣ್ಣಗಾಗಲು ಬಿಡದೇ ವ್ಯಕ್ತಿಗತವಾಗಿಯೂ ಸಮಗ್ರವಾಗಿಯೂ ಇದು ಜೀವಂತವಾಗಿರುವಂತೆ ಮಾಡಲು ಪ್ರಯತ್ನಿಸಬೇಕು.''

ಈ ಭಾಷಣದ ಮತ್ತೊಂದು ತುಣುಕು :

''ಸೋದರರೇ, ಶ್ರೀರಾಮಕೃಷ್ಣ ಶತಮಾನೋತ್ಸವದ ಪ್ರಭಾವವನ್ನು ನಾವು ಹಿಡಿದಿಡಲೇಬೇಕು. ನಮ್ಮ ಸಂಘದ ವಿವಿಧ ಕೇಂದ್ರಗಳಲ್ಲಿದ್ದು, ಜನಸೇವೆ, ಶಿಕ್ಷಣದ ಜೊತೆ ಧರ್ಮಪ್ರಚಾರ ಕೆಲಸವನ್ನು ಈ ವಿಶಾಲ ಮಹಾದೇಶದ ಎಲ್ಲೆಡೆಯಲ್ಲೂ ಹರಡಲು ನಾನಾ ಕೇಂದ್ರಗಳಲ್ಲಿ ವಿವಿಧ ಕೆಲಸಗಳಲ್ಲಿ ನಾವೆಲ್ಲ ನಿರತರಾಗಿದ್ದರೂ ಸಹ ನಮ್ಮ ಹೃದಯ ಮಿಡಿತ ಒಂದೇ. ಏಕೆಂದರೆ ನಾವೆಲ್ಲರೂ ಒಂದೇ ಆರಾಧ್ಯ ಆದರ್ಶವಾದ ಶ್ರೀರಾಮಕೃಷ್ಣ-ವಿವೇಕಾನಂದರ ಪಾದಪದ್ಮಗಳಲ್ಲಿ ಬಂಧಿತರಾಗಿದ್ದೇವೆ.''

*(ಮುಂದುವರಿಯುವುದು)*

ಮೂಲ ಹಿಂದೀ : **ಸ್ವಾಮಿ ಬ್ರಹ್ಮೇಶಾನಂದ**

ಅನುವಾದ : **ಮಾತಾ ತ್ಯಾಗಮಯೀ**

# ಶಾಶ್ವತ ಪ್ರಶ್ನೆಗಳು

**ಭ**ಗವದ್ಗೀತೆ ಹೇಳುವ ಆರ್ತ, ಅರ್ಥಾರ್ಥಿ, ಜಿಜ್ಞಾಸು ಮತ್ತು ಜ್ಞಾನಿ — ಈ ನಾಲ್ಕು ಬಗೆಯ ಜನ ಭಗವಂತನನ್ನು ಭಜಿಸುತ್ತಾರೆ. ಈ ನಾಲ್ವರೂ ಉದಾರರೇ. ಆದರೆ ಎಲ್ಲಿಯವರೆಗೆ ಜನರು ಆಸೆಗಳನ್ನು ಪೂರೈಸುವುದಕ್ಕಾಗಿ, ದುಃಖಗಳ ನಾಶಕ್ಕಾಗಿ ಭಗವಂತನ ಮೊರೆ ಹೋಗುತ್ತಾರೋ, ಅಲ್ಲಿಯವರೆಗೆ ಅವನು ಭಜನೆ ಸಾಧನೆಯನ್ನು ಮಾಡುತ್ತಿದ್ದರೂ, ನಿಜವಾದ ಅರ್ಥದಲ್ಲಿ ಆಧ್ಯಾತ್ಮಿಕ ಜೀವನ ಪ್ರಾರಂಭವಾಗಿರುವುದಿಲ್ಲ. ಹೆಚ್ಚಿನ ಜನ ವಿಷಯಭೋಗಗಳಲ್ಲಿ, ಅರ್ಥಕಾಮಗಳನ್ನು ತೃಪ್ತಿಪಡಿಸುವಲ್ಲಿ ಆಸಕ್ತರಾಗಿರುತ್ತಾರೆ. ಆದರೆ ಕೆಲವರು ಅದರಿಂದ ತೃಪ್ತರಾಗುವುದಿಲ್ಲ. ಅವರು ಅವುಗಳಲ್ಲಿ ಅರುಚಿಯನ್ನು ತಾಳಿ, ಬೇರೆ ಗಂಭೀರ ಪ್ರಶ್ನೆಗಳನ್ನು ಕೇಳುತ್ತಾರೆ. ವಿಷಯಭೋಗಗಳೇ ಜೀವನದ ಸರ್ವಸ್ವವೆ? ಪರಮ ಸತ್ಯ ಯಾವುದು? ಭಗವಂತ ಇದ್ದಾನೆಯೆ? — ಇತ್ಯಾದಿ. ಇವರು ಜಿಜ್ಞಾಸುಗಳು. ಇದು ಜಿಜ್ಞಾಸೆಯ ಆರಂಭ. ಆಧ್ಯಾತ್ಮಿಕ ಜೀವನದ ಆರಂಭ. ಈ ಶಾಶ್ವತ ಪ್ರಶ್ನೆ ಗಳಿಂದಲೇ ಉಪನಿಷತ್ತುಗಳು ತೆರೆದುಕೊಳ್ಳುತ್ತವೆ.

ಕಠೋಪನಿಷತ್ತಿನಲ್ಲಿ ಬಾಲಕ ನಚಿಕೇತ ಯಮಧರ್ಮನಿಗೆ ಕೇಳಿದ ಪ್ರಶ್ನೆಯನ್ನು ತೆಗೆದುಕೊಳ್ಳೋಣ.

**'ಯೇಯಂ ಪ್ರೇತೇ ವಿಚಿಕಿತ್ಸಾ ಮನುಷ್ಯೇಽಸ್ತೀತ್ಯೇಕೇ ನಾಯ ಮಸ್ತೀತಿ ಚೈಕೇ ।'** — 'ಕೆಲವರು ಹೇಳುತ್ತಾರೆ, ಮನುಷ್ಯನು ತೀರಿಕೊಂಡ ಮೇಲೆ ಇರುತ್ತಾನೆ, ಇನ್ನು ಕೆಲವರು ಹೇಳುತ್ತಾರೆ, ಅವನು ತೀರಿಕೊಂಡ ಮೇಲೆ ಇರುವುದಿಲ್ಲ. ಇವೆರೆಡರಲ್ಲಿ ಯಾವುದು ಸತ್ಯ ? ವ್ಯಕ್ತಿ ತೀರಿಕೊಂಡ ಮೇಲೆ ಏನಾಗುತ್ತಾನೆ? ನಾನು ಇದನ್ನು ಅರಿಯ ಬಯಸುತ್ತೇನೆ.' ಈ ಪ್ರಶ್ನೆಯನ್ನು ಅನಾದಿ ಕಾಲದಿಂದ ಕೇಳಲಾಗಿದೆ. ಇದನ್ನು ಅನಂತಕಾಲದವರೆಗೆ ಕೇಳುತ್ತಲೂ ಇರುತ್ತಾರೆ. ಮನುಷ್ಯನ ಶಾಶ್ವತವಾಗಿರಬೇಕೆಂಬ ಬಯಕೆ, ಅಮರನಾಗುವ ಆಸೆ ಅವನಿಂದ ಈ ಪ್ರಶ್ನೆಯನ್ನು ಕೇಳುವಂತೆ ಮಾಡುತ್ತದೆ. ಅಮರತ್ವವು ಜೀವನದ ಗುರಿ ಎನ್ನುವು ದಾದರೆ ಅದನ್ನು ದೇವತೆಗಳ ವರದಾನದಿಂದ ಪಡೆಯ ಬಹುದಲ್ಲ ಎಂಬ ಸಂಶಯ ಬರಬಹುದು. ಮರಣಾನಂತರ ಏನು ಎಂದು ಜಿಜ್ಞಾಸ್ಯೆದು ಪ್ರಯೋಜನವೇನು? ಜ್ಞಾನದ ಮಹಿಮೆಯ ನ್ನರಿಯದ್ದರಿಂದ ಈ ಸಂಶಯ ಬರುತ್ತದೆ. ಮನುಷ್ಯನ ಸ್ವರೂಪ ವೇನು ಎಂಬುದು ಈ ಪ್ರಶ್ನೆಯ ತಾತ್ಪರ್ಯ. ದೇಹವನ್ನು ಮನುಷ್ಯನ ಸ್ವರೂಪ ಎಂದು ಬಗೆದರೆ ಅದು ನಶ್ವರ. ಮನುಷ್ಯನನ್ನು ಆತ್ಮ ಎನ್ನುವು ದಾದರೆ ಅವನು ಸಾಯುತ್ತಾನೆ ಎನ್ನುವ ಮಾತೇ ತಪ್ಪಾಗುತ್ತದೆ. ಆದ್ದರಿಂದ ಆತ್ಮಸ್ವರೂಪವನ್ನು ಅರಿಯುವುದೇ ಅಮರನಾಗುವುದು ಎಂಬುದರ ಅರ್ಥ.

ಮುಂಡಕ ಉಪನಿಷತ್ತು ಗೃಹಸ್ಥನಾದ ಶೌನಕಋಷಿಯು ಅಂಗಿರಸನನ್ನು ಪ್ರಶ್ನಿಸುವುದರೊಂದಿಗೆ ಆರಂಭವಾಗುತ್ತದೆ: **'ಕಸ್ಮಿನ್ನು ಭಗವೋ ವಿಜ್ಞಾತೇ ಸರ್ವಮಿದಂ ವಿಜ್ಞಾತಂ ಭವತಿ'** — ಯಾವುದನ್ನು ಅರಿಯುವುದರಿಂದ ಎಲ್ಲವನ್ನು ಅರಿತಂತಾಗುತ್ತದೆ? ಎಂತಹ ಅದ್ಭುತ ಪ್ರಶ್ನೆ! ಮಾನವನ ನಿರಂತರ ಜ್ಞಾನಪಿಪಾಸೆಯ ಪ್ರತೀಕ ಈ ಪ್ರಶ್ನೆ. ಮನುಷ್ಯ ಜೀವನದ ಏಕಮಾತ್ರ ಗುರಿ ಸುಖ ಎಂದೆನ್ನುವುದು ತಪ್ಪಾಗುತ್ತದೆ. ಆನಂದ ಮನುಷ್ಯನ ಸಹಜ ಸ್ವಭಾವ. ಅಂತೆಯೇ ಜ್ಞಾನವನ್ನು ಪಡೆಯಬೇಕೆನ್ನುವುದು ಮನುಷ್ಯನ ಸಹಜ ಸ್ವಭಾವ. ತನ್ನ ರಹಸ್ಯವನ್ನು, ಬ್ರಹ್ಮಾಂಡದ ಅರಿವನ್ನು ಪಡೆಯಲು ಹೊರಟ ಮನುಷ್ಯ ಜೀವನ ಎಷ್ಟು ಅಲ್ಪವಾದುದು! ಅವನ ಜ್ಞಾನೇಂದ್ರಿಯ ಮತ್ತು ಮನಸ್ಸು ಎಷ್ಟು ಸೀಮಿತವಾದುದು! ಅವನು ಜ್ಞಾನದ ವಿಭಿನ್ನ ಶಾಖೆಗಳನ್ನು ಜನ್ಮ ಜನ್ಮಗಳವರೆಗೆ ಅಧ್ಯಯನ ಮಾಡಿದರೂ ವಿಶ್ವದ ಜ್ಞಾನ ಭಂಡಾರ ಮುಕ್ತಾಯವಾಗದು. ಪಾತ್ರೆಯೊಳಗಿನ ಅಕ್ಕಿ ಬೆಂದಿದೆಯೇ ಎಂದು ತಿಳಿಯಲು ಒಂದೆರಡು ಅಕ್ಕಿ ಕಾಳನ್ನು ಮುಟ್ಟಿ ನೋಡಿದರೆ ತಿಳಿಯುವಂತೆ, ಯಾವ ಜ್ಞಾನವನ್ನು ಪಡೆಯುವುದರಿಂದ ಎಲ್ಲವನ್ನೂ ಅರಿತ ಹಾಗೆ ಆಗುತ್ತದೆ — ಎಂಬುದು ಶಿಷ್ಯನ ಪ್ರಶ್ನೆಯ ಅರ್ಥ.

ಈ ಸಂದರ್ಭದಲ್ಲಿ ನಾರದ-ಸನತ್ಕುಮಾರರ ಸಂವಾದವನ್ನು ನೆನಪಿಸಿಕೊಳ್ಳಬೇಕು. ನಾರದನು ವೇದ, ಪುರಾಣ, ದೇವವಿದ್ಯೆ , ಭೂತ ವಿದ್ಯೆ , ನಕ್ಷತ್ರವಿದ್ಯೆ ಇತ್ಯಾದಿಗಳನ್ನು ಕಲಿತಾಗಿತ್ತು . ಆದರೂ ಅವನು ಶೋಕರಹಿತನಾಗಿರಲಿಲ್ಲ. ಅವನು ವೇದವಿತ್ ಆಗಿದ್ದನು. ಆದರೆ ಆತ್ಮವಿತ್ ಆಗಿರಲಿಲ್ಲ ಎಂದು ಅವನೇ ಹೇಳುತ್ತಾನೆ. ''ತಾವು ನನಗೆ ಆತ್ಮವಿದನಾಗುವ ಶಿಕ್ಷಣವನ್ನು ನೀಡಿರಿ. ಏಕೆಂದರೆ ಆತ್ಮವಿದನೊಬ್ಬನೇ ಶೋಕಸಾಗರವನ್ನು ದಾಟಬಲ್ಲನು'' ಎನ್ನುತ್ತಾನೆ ನಾರದ. ಈ ಪ್ರಶ್ನೆಯಲ್ಲಿ ದ್ವೈತ ಜಗತ್ತಿನ ಹಿಂದಿನ ಅದ್ವೈತ ತತ್ತ್ವವನ್ನು ಅರಿಯುವ ಜಿಜ್ಞಾಸೆ ಅಡಗಿದೆ.

ಪ್ರಶ್ನೋಪನಿಷತ್ತಿನಲ್ಲಿ ಋಷಿ ಪಿಪ್ಪಲಾದನ ಬಳಿ ಐವರು ಶಿಷ್ಯರು ಒಂದೊಂದು ಪ್ರಶ್ನೆಗಳನ್ನು ಕೇಳಿದ್ದನ್ನು ನೋಡುತ್ತೇವೆ. ಆತ್ಮವಸ್ತುವನ್ನು ಅರಿಯಬೇಕೆನ್ನುವುದೇ ಅವರ ಪ್ರತಿಯೊಂದು ಪ್ರಶ್ನೆಯ ಉದ್ದೇಶ. ಆದರೆ ಅವರು ನೇರವಾಗಿ ಬ್ರಹ್ಮವಸ್ತುವನ್ನು ಪ್ರಶ್ನಿಸುವ ಬದಲು, ಪ್ರಜೆಗಳ ಉತ್ಪತ್ತಿ ಹೇಗೆ ಆಗುತ್ತದೆ, ಪ್ರಜೆಗಳನ್ನು ಪಾಲನೆ ಮಾಡುವ ದೇವರು ಯಾರು? ಅವರಲ್ಲಿ ಶ್ರೇಷ್ಠನಾರು? ಪ್ರಾಣವು ಶರೀರವನ್ನು ಹೇಗೆ ಪ್ರವೇಶಿಸುತ್ತದೆ? ಶರೀರದೊಳಗೆ ಮಲಗುವವನು, ಸ್ವಪ್ನ ಕಾಣುವವನು ಮತ್ತು ಎಚ್ಚರದಿಂದಿರುವವನು ಯಾರು? ಓಂಕಾರವನ್ನು ಧ್ಯಾನಿಸುತ್ತ ಪ್ರಾಣ ಬಿಡುವವನಿಗೆ ಸಿಗುವ ಗತಿಯೇನು? ಎಂದು ಪ್ರಶ್ನಿಸುತ್ತಾರೆ.

ಶ್ವೇತಾಶ್ವತರ ಉಪನಿಷತ್ತಿನ ಆರಂಭವೂ ಪ್ರಶ್ನೆಯಿಂದಲೇ ಆರಂಭವಾಗುತ್ತದೆ: ಕೆಲವು ಬ್ರಹ್ಮವಿದರಾದ ಋಷಿಗಳು ಮಾನವ ಜೀವನದ ಗುರಿಯನ್ನು ಕುರಿತು ಪರಸ್ಪರ ಚರ್ಚಿಸುತ್ತಾರೆ: *(೧.೧.)*

**ಕಿಂ ಕಾರಣಂ ಬ್ರಹ್ಮ ಕುತಃ ಸ್ಮ ಜಾತಾ**
**ಜೀವಾಮ ಕೇನ ಕ್ವ ಚ ಸಂಪ್ರತಿಷ್ಠಾಃ ।**

ಅಧಿಷ್ಠಿತಾಃ ಕೇನ ಸುಖೇತರೇಷು
ವರ್ತಾಮಹೇ ಬ್ರಹ್ಮವಿದೋ ವ್ಯವಸ್ಥಾಮ್ ॥

ಪರಬ್ರಹ್ಮವು ನಮ್ಮ ಉತ್ಪತ್ತಿಗೆ ಕಾರಣವೇನು? ನಮ್ಮ ಜನ್ಮ ಎಲ್ಲಿಂದ ಆಯಿತು? ನಾವು ಯಾವ ಶಕ್ತಿಯಿಂದ ಜೀವಂತವಾಗಿದ್ದೇವೆ? ನಮಗೆ ಆಧಾರ ಯಾವುದು? ಯಾರಿಂದ ಪ್ರೇರಿತರಾಗಿ ನಾವು ಸುಖ-ದುಃಖಗಳನ್ನು ಅನುಭವಿಸುವಂತಾಗುತ್ತದೆ ?

ಕೇನ ಉಪನಿಷತ್ತು ಪ್ರಶ್ನ ವಾಚಕದಿಂದಲೇ ಆರಂಭವಾಗುತ್ತದೆ.

ಕೇನೇಷಿತಂ ಪತತಿ ಪ್ರೇಷಿತಂ ಮನಃ
ಕೇನ ಪ್ರಾಣಃ ಪ್ರಥಮಃ ಪ್ರೈತಿ ಯುಕ್ತಃ ।
ಕೇನೇಷಿತಾಂ ವಾಚಮಿಮಾಂ ವದಂತಿ
ಚಕ್ಷುಃ ಶ್ರೋತ್ರಂ ಕ ಉ ದೇವೋ ಯುನಕ್ತಿ ॥

*(ಕೇನೋಪನಿಷತ್ತು, ೧.೧)*

'ಯಾರಿಂದ ಪ್ರೇರಿತವಾಗಿ ಮನಸ್ಸು ವಿಷಯಗಳೆಡೆಗೆ ಹೋಗುತ್ತದೆ? ಪ್ರಾಣ ತನ್ನ ಕಾರ್ಯವನ್ನು ಮಾಡಲು ಕಾರಣನಾರು? ಯಾವುದರಿಂದ ಪ್ರೇರಿತವಾಗಿ ವಾಕ್ಕು ಹೊರಹೊಮ್ಮುತ್ತದೆ? ಚಕ್ಷು ಮತ್ತು ಶ್ರೋತ್ರವನ್ನು ತಮ್ಮ ತಮ್ಮ ಕಾರ್ಯಗಳಲ್ಲಿ ತೊಡಗಿಸುವವರು ಯಾರು?'

ದೇಹ-ಇಂದ್ರಿಯ-ಪ್ರಾಣಗಳನ್ನು ನಾವು ಬಲ್ಲೆವು. ಸಾಮಾನ್ಯವಾಗಿ ನಾವು ಈ ಅಂಗಗಳ ಸತ್ಯತ್ವವನ್ನು ಯಾವ ವಿಚಾರವಿಲ್ಲದೆ ಒಪ್ಪಿಕೊಂಡಿದ್ದೇವೆ. ಮಾನವನ ಜ್ಞಾನಪಿಪಾಸೆಯು ಅವನಿಗೆ ಅವುಗಳ ಸ್ವರೂಪ ಮತ್ತು ಅವುಗಳ ಹಿಂದಿರುವ ದೈವೀ ಶಕ್ತಿಯನ್ನು ಅರಿಯುವಂತೆ ಪ್ರೇರೇಪಿಸುತ್ತದೆ. ಈ ಬೇರೆ ಬೇರೆ ಪ್ರಶ್ನೆಗಳಿಂದ ವ್ಯಕ್ತಿ ಜಗತ್ತಿನ ಕಾರಣವನ್ನು ಶೋಧಿಸಬಯಸುತ್ತಾನೆ.

ಉಪನಿಷತ್ತಿನ ಪ್ರಶ್ನೆಗಳೊಂದಿಗೆ ಬುದ್ಧ ಮತ್ತು ಸ್ವಾಮಿ ವಿವೇಕಾನಂದರ ಪ್ರಶ್ನೆಗಳನ್ನು ಸೇರಿಸಿದರೆ ನಮ್ಮ ಈ ಪ್ರಶ್ನೆಗಳ ಸರಣಿಯು ಪೂರ್ಣವಾಗುತ್ತದೆ. ಸ್ವಾಮಿ ವಿವೇಕಾನಂದರು ಶ್ರೀರಾಮಕೃಷ್ಣರ ಬಳಿ, ''ಮಹಾಶಯರೆ, ನೀವು ದೇವರನ್ನು ಕಂಡಿದ್ದೀರಾ?'' ಎಂದು ಕೇಳಿದರು. ಇದು ಅದೇ ಹಳೆಯ ಗೊಡ್ಡು ಪ್ರಶ್ನೆ ಅಲ್ಲ, ಆಧುನಿಕ ಸಂಶಯವಾದಿ ವಿಚಾರಧಾರೆಯನ್ನು ಪ್ರತಿನಿಧಿಸುವ ಜಿಜ್ಞಾಸೆ ಇದು. ಇಂದ್ರಿಯಗೋಚರ ಜಗತ್ತಿನ ಹಿನ್ನೆಲೆಯಲ್ಲಿ ಒಂದು ಅತೀಂದ್ರಿಯ ನಿತ್ಯಸತ್ಯ ವಸ್ತು ಇದೆ ಏನು? ಅದನ್ನು ಸಾಕ್ಷಾತ್ಕರಿಸಿಕೊಳ್ಳಲು ಸಾಧ್ಯವೆ? ವಿಷಯಸುಖಭೋಗಗಳು ಜೀವನದ ಗುರಿ ಏನು? ಮೃತ್ಯುವಿನೊಂದಿಗೆ ಜೀವನ ಮುಕ್ತಾಯವಾಗುವುದೇನು? ಅಥವಾ ಭಗವತ್ ಸಾಕ್ಷಾತ್ಕಾರದಿಂದ ಅಮರರಾಗುವುದು ಜೀವನದ ಗುರಿ ಏನು? ಈ ಎಲ್ಲ ಭಾವನೆಯು ಆ ಒಂದು ಪುಟ್ಟ ಪ್ರಶ್ನೆಯಲ್ಲಿ ಅಡಗಿದೆ.

ಬುದ್ಧ ತನಗೆ ತಾನೇ ಯಾವ ಪ್ರಶ್ನೆಗಳನ್ನು ಕೇಳಿದನೆಂಬುದು ವಿಶ್ವಪ್ರಸಿದ್ಧ. ರೋಗ, ವೃದ್ಧಾಪ್ಯ ಮತ್ತು ಮರಣವನ್ನು ಕಂಡು ಅವನು ತನ್ನ ಸಾರಥಿಯನ್ನು ಆ ಕುರಿತಾಗಿ ಪ್ರಶ್ನಿಸಿದನು. ರೋಗ, ವೃದ್ಧಾಪ್ಯ ಇವೆಲ್ಲ ಅನಿವಾರ್ಯ, ಅಪರಿಹಾರ್ಯ ಎಂಬ ಅವನ ಉತ್ತರದಿಂದ ಬುದ್ಧನಿಗೆ ಸಮಾಧಾನವಾಗಲಿಲ್ಲ. ಬುದ್ಧನು ರೋಗ, ವೃದ್ಧಾಪ್ಯ ಮತ್ತು ಸಾವನ್ನು ದುಃಖ ಎಂದು ಕರೆದನು. ದುಃಖದ ಕಾರಣವನ್ನು ಮತ್ತು ಅದಕ್ಕೆ ಪರಿಹಾರವನ್ನು ಪಡೆಯಲು ಅವನು ಗೃಹತ್ಯಾಗ ಮಾಡಿದನು.

ಮೇಲಣ ಎಲ್ಲ ಪ್ರಶ್ನೆಗಳ ಉತ್ತರಗಳು ಎಲ್ಲ ಶಾಸ್ತ್ರಗಳಲ್ಲಿ, ಗ್ರಂಥಗಳಲ್ಲಿ ಮತ್ತು ಮಹಾಪುರುಷರ ಉಪದೇಶವಾಣಿಗಳಲ್ಲಿ ಇಂದು ನಮಗೆ ಸುಲಭವಾಗಿ ಸಿಗುತ್ತವೆ. ಆದರೂ ಈ ಪ್ರಶ್ನೆಗಳು ಪ್ರಶ್ನೆಗಳಾಗಿಯೇ ಇರುತ್ತವೆ. ಕಾರಣವೇನೆಂದರೆ ಪ್ರತಿಯೊಬ್ಬ ವ್ಯಕ್ತಿಯೂ ಈ ಪ್ರಶ್ನೆಗಳಿಗೆ ಉತ್ತರವನ್ನು ತಾನೇ ಪಡೆಯಬೇಕು. ಇದು ಪ್ರಾಚೀನ ನಿಯಮ, ಇವತ್ತಿನ ನಿಯಮ ಮತ್ತು ಭವಿಷ್ಯದ ನಿಯಮವೂ ಹೌದು. ದುಃಖಕ್ಕೆ ಕಾರಣ ತೃಷ್ಣೆ. ಭಗವಂತನನ್ನು ಕಾಣಬಹುದು. ದೇಹ ತೀರಿಕೊಂಡರೂ ಆತ್ಮ ಅಮರ - ಎಂದೆಲ್ಲ ಬೌದ್ಧಿಕವಾಗಿ ತಿಳಿದುಕೊಂಡ ಮಾತ್ರಕ್ಕೆ ದುಃಖ ನಾಶವಾಗಲಾರದು. ದೇವರ ದರ್ಶನವೂ ಆಗದು, ಆತ್ಮಸಾಕ್ಷಾತ್ಕಾರವೂ ಆಗದು. ಇವುಗಳ ಉತ್ತರವನ್ನು ನಾವು ಸಾಕ್ಷಾತ್ಕಾರದಿಂದ ಪಡೆಯದೆ, ಆ ಉತ್ತರವನ್ನು ರಕ್ತಗತವಾಗಿಸಿಕೊಳ್ಳದೆ ಪ್ರಶ್ನೆ ಪ್ರಶ್ನೆಯಾಗಿಯೇ ಉಳಿಯುತ್ತದೆ. ಈ ಪ್ರಶ್ನೆಗಳಿಗೆ ಉತ್ತರವನ್ನು ಪಡೆಯುವುದನ್ನೇ ಸಾಧನೆ ಎಂದು ಕರೆಯಲಾಗಿದೆ.

# ಪಾರ್ಥಸಾರಥಿ ಶ್ರೀಕೃಷ್ಣ: ಪರಿಪೂರ್ಣ ಜೀವನಾದರ್ಶ

### ಧರ್ಮಗ್ರಂಥಗಳಲ್ಲಿ ರಥ

ಸೂಕ್ಷ್ಮ ಆಧ್ಯಾತ್ಮಿಕ ತತ್ತ್ವಗಳನ್ನು ದೃಷ್ಟಾಂತಗಳು ಮತ್ತು ಆಖ್ಯಾನಗಳ ಸಹಾಯದಿಂದ ವಿವರಿಸಲಾಗಿದೆ. ರಥ ಅಂತಹ ಒಂದು ಹೋಲಿಕೆ. ಆಧ್ಯಾತ್ಮಿಕ ಸಾಹಿತ್ಯದಲ್ಲಿ ಅನೇಕ ಕಡೆಗಳಲ್ಲಿ ರಥದ ಹೋಲಿಕೆಯನ್ನು ಕೊಡಲಾಗಿದೆ. ಕಠೋಪನಿಷತ್ತಿನಲ್ಲಿ ದೇಹವನ್ನು ರಥಕ್ಕೆ ಹೋಲಿಸಿದ್ದಾರೆ. ತನ್ಮೂಲಕ ಜೀವಾತ್ಮನ ಸ್ವರೂಪವನ್ನು ವಿವರಿಸಿದ್ದಾರೆ:

ಆತ್ಮಾನಂ ರಥಿನಂ ವಿದ್ಧಿ ಶರೀರಂ ರಥಮೇವ ತು ।
ಬುದ್ಧಿಂ ತು ಸಾರಥಿಂ ವಿದ್ಧಿ ಮನಃ ಪ್ರಗ್ರಹಮೇವ ಚ ॥
ಇಂದ್ರಿಯಾಣಿ ಹಯಾನಾಹುರ್ವಿಷಯಾಂಸ್ತೇಷು ಗೋಚರಾನ್ ।
ಆತ್ಮೇಂದ್ರಿಯಮನೋಯುಕ್ತಂ ಭೋಕ್ತೇತ್ಯಾಹುರ್ಮನೀಷಿಣಃ ॥

'ಆತ್ಮನನ್ನು ರಥಿ ಎಂದು ತಿಳಿ. ಶರೀರವನ್ನು ರಥ ಎಂದು ತಿಳಿದುಕೊ. ಬುದ್ಧಿಯನ್ನು ಸಾರಥಿ ಮತ್ತು ಮನಸ್ಸನ್ನು ಲಗಾಮು ಎಂದು ತಿಳಿದುಕೋ. ಇಂದ್ರಿಯಗಳನ್ನು ಕುದುರೆಗಳು ಎಂದು ತಿಳಿ. ಅವು ವಿಷಯಗಳೆಂಬ ಮಾರ್ಗದಲ್ಲಿ ಧಾವಿಸುತ್ತವೆ. ಇಂದ್ರಿಯ, ಮನಸ್ಸು ಮತ್ತು ಬುದ್ಧಿಯಿಂದ ಕೂಡಿದ ಆತ್ಮನನ್ನು ಭೋಕ್ತಾ ಅಥವಾ ಜೀವ ಎಂದು ಕರೆಯಲಾಗಿದೆ.'



ತುಲಸೀದಾಸರ 'ರಾಮಚರಿತಮಾನಸ'ದ ಲಂಕಾಕಾಂಡದಲ್ಲಿ ಧರ್ಮರಥವನ್ನು ಹೀಗೆ ವರ್ಣಿಸಲಾಗಿದೆ:

ರಾವನು ರಥೀ ವಿರಥ ರಘುಬೀರಾ ।
ದೇಖಿ ವಿಭೀಷನ ಭಯಉ ಅಧೀರಾ ॥

ಅಧಿಕ ಪ್ರೀತಿ ಮನ ಭಾ ಸಂದೇಹಾ ।
ಬಂದಿ ಚರನ ಕಹ ಸಹಿತ ಸನೇಹಾ ॥

ನಾಥ ನ ರಥ ನಹಿ ತನ ಪದ ತ್ರಾನಾ ।
ಕೇಹಿ ಬಿಧಿ ಜಿತಬ ಬೀರ ಬಲವಾನಾ ॥

ಸುನಹು ಸಖಾ ಕಹ ಕೃಪಾನಿಧಾನಾ ।
ಜಂಹಿ ಜಯ ಹೋಇ ಸೋ ಸ್ಯಂದನ ಆನಾ ॥

ಧೀರಜ ಸೌರಜ ತೇಹಿ ರಥ ಚಾಕಾ ।
ಸತ್ಯ ಶೀಲ ದೃಢ ಧ್ವಜಾ ಪತಾಕಾ ॥

ಬಲ ಬಿವೇಕ ದಮ ಪರಹಿತ ಘೋರೇ ।
ಛಮಾ ಕೃಪಾ ಸಮತಾ ರಜು ಜೋರೇ ॥

ಈಸ ಭಜನು ಸಾರಥೀ ಸುಜಾನಾ ।
ಬಿರತಿ ಚರ್ಮ ಸಂತೋಷ ಕೃಪಾನಾ ॥

(೬, ೧೧೦, ೧ - ೪)

ಇಲ್ಲಿ ನೈತಿಕ ಆದರ್ಶಗಳಿಂದ ಕೂಡಿದ ರಥದ ಒಂದು ಸುಂದರವಾದ ಉದಾಹರಣೆಯನ್ನು ಕೊಡಲಾಗಿದೆ. ಶೌರ್ಯ ಮತ್ತು ಧೈರ್ಯಗಳು ರಥದ ಎರಡು ಚಕ್ರಗಳು. ಸತ್ಯ ಮತ್ತು ಶೀಲ ರಥದ ಧ್ವಜ ಮತ್ತು ಪತಾಕೆ. ಬಲ, ವಿವೇಕ, ದಮ ಮತ್ತು ಪರಹಿತಗಳು ರಥದ ಕುದುರೆಗಳು. ಅದಕ್ಕೆ ಕೃಪೆ, ಕ್ಷಮೆ ಮತ್ತು ಸಮತೆಯ ಲಗಾಮು. ಭಗವತ್ ಸ್ಮರಣೆಯೇ ಈ ರಥದ ಸಾರಥಿ.

ಜಗನ್ನಾಥ ಮಹಾಪ್ರಭುವಿನ ಒಂದು ಪ್ರಸಿದ್ಧವಾದ ರಥ ಇದೆ. ಅದನ್ನು ವೈಷ್ಣವರು ಪರಮ ಪವಿತ್ರವೆಂದು ಬಗೆಯುತ್ತಾರೆ. ರಥಾರೂಢನಾದ ಜಗನ್ನಾಥನ ದರ್ಶನ ಮಾಡುವ ಜೀವರಿಗೆ ಅವನು ಜನ್ಮ ಮರಣ ಚಕ್ರದಿಂದ ಮುಕ್ತಿಯನ್ನು ನೀಡುತ್ತಾನೆ, ''ರಥೇ ಚ ವಾಮನಂ ದೃಷ್ಟ್ವಾ ಪುನರ್ಜನ್ಮ ನ ವಿದ್ಯತೇ''. ಇದರ ಇನ್ನೊಂದು ಅರ್ಥ, ದೇಹವೆಂಬ ರಥದಲ್ಲಿರುವ ಆತ್ಮನ ಶುದ್ಧಚೈತನ್ಯದ ದರ್ಶನದಿಂದ ಮುಕ್ತಿ.

ಇನ್ನೊಂದು ರಥ ಇದೆ. ಹಿಂದುಗಳೆಲ್ಲರೂ ಆ ರಥವನ್ನು ಬಲ್ಲರು. ಅರ್ಜುನನ ರಥ, ಶ್ರೀಕೃಷ್ಣ ಗೀತೆಯನ್ನು ಉಪದೇಶಿಸಿದ ರಥ. ಗೀತೆಯ ಉಪದೇಶಗಳು ಅತಿ ಜನಪ್ರಿಯ ಹಾಗೂ ಮಹತ್ವಪೂರ್ಣವಾದ್ದರಿಂದ ಯಾವ ರಥದಲ್ಲಿ ಕುಳಿತು ಪ್ರಭು ಆ ಚರಮಸಂದೇಶಗಳನ್ನು ಮೊಳಗಿದನೋ ಆ ರಥ ಗೌಣವಾಗಿರಲು ಸಾಧ್ಯವಿಲ್ಲ. ಆ ರಥವನ್ನು ಕೇವಲ ಒಂದು ವಾಹನ ಎಂದು ಬಗೆಯಲಾಗದು. ಅದರ ಮಹಿಮೆಯೆಡೆಗೆ ನಾವು ಗಮನಕೊಟ್ಟಿಲ್ಲವೆಂದೆನ್ನಿಸುತ್ತದೆ. ಸ್ವಾಮಿ ವಿವೇಕಾನಂದರು ಆ ರಥದ ಆಧ್ಯಾತ್ಮಿಕ ಅರ್ಥದ ಕಡೆಗೆ ನಮ್ಮ ಗಮನವನ್ನು ಸೆಳೆಯುತ್ತಾರೆ. ''ಗೀತೆಯ ಮೂರ್ತಸ್ವರೂಪವಾಗಿ ನಾವು ಕೃಷ್ಣನ ಚಿತ್ರಣವನ್ನು ನೀಡತಕ್ಕದ್ದು. ಶ್ರೀಕೃಷ್ಣ ನಿರಂತರ ಕಾರ್ಯಶೀಲನಾಗಿದ್ದಾನೆ. ಆದರೆ ಅವನ ಮುಖದಲ್ಲಿ ಗಗನದಂತಹ ಗಾಂಭೀರ್ಯ: ಶಾಂತಿ ಮತ್ತು ಪ್ರಸನ್ನತೆ ತುಂಬಿದೆ. ಗೀತೆಯ ಮೂಲತತ್ತ್ವ ಇದೇ ಆಗಿದೆ — ಎಲ್ಲ ಪರಿಸ್ಥಿತಿಗಳಲ್ಲಿ ಶಾಂತ ಮತ್ತು ಅನುದ್ವಿಗ್ನರಾಗಿದ್ದು ದೇಹ ಮನ ಪ್ರಾಣಗಳನ್ನು ಭಗವಂತನ ಪಾದಪದ್ಮಗಳಲ್ಲಿ ಅರ್ಪಿಸುವುದು.'' ಕೃಷ್ಣನ ರಥ ಧ್ಯಾನವಸ್ತುವೇ ಸರಿ. ಈ ರಥ ಕಠೋಪನಿಷತ್ತಿನ ರಥದ ಹೋಲಿಕೆಯನ್ನು, ರಾಮಚರಿತ ಮಾನಸದ ಧರ್ಮರಥವನ್ನು ನೆನಪಿಸುತ್ತದೆ. ಈ ರಥ ಅತ್ಯುನ್ನತ ಆದರ್ಶವನ್ನು ಪ್ರತಿನಿಧಿಸುತ್ತದೆ.

### ರಥದ ಆಧ್ಯಾತ್ಮಿಕ ಅರ್ಥ

ರಥವನ್ನು ವರ್ಣಿಸುತ್ತ ಸ್ವಾಮಿ ವಿವೇಕಾನಂದರು ಹೇಳುತ್ತಾರೆ, ''ಶ್ರೀಕೃಷ್ಣ ಕುದುರೆಗಳ ಲಗಾಮನ್ನು ಯಾವ ರೀತಿ ಹಿಡಿದುಕೊಂಡಿದ್ದಾನೆಂದರೆ ಅವು ತಮ್ಮ ಹಿಂಗಾಲುಗಳಿಂದ ನಿಂತಿವೆ, ಮುಂಗಾಲುಗಳು ಗಾಳಿಯಲ್ಲಿ ತೇಲುತ್ತಿವೆ. ಅವುಗಳ ಬಾಯಿಗಳು ತೆರೆದಿವೆ. ಶಕ್ತಿಶಾಲಿಯಾದ, ಚಂಚಲವಾದ, ಓಡಲುದ್ಯುಕ್ತವಾದ ಕುದುರೆಗಳು ಪಟುವಾದ, ಪ್ರಬಲ ಇಂದ್ರಿಯಗಳ ಪ್ರತೀಕ. ಅಂತಹ ಇಂದ್ರಿಯಗಳನ್ನು ಮನಸ್ಸೆಂಬ ಲಗಾಮಿನಿಂದ ಹಿಡಿದುಕೊಳ್ಳಲಾಗಿದೆ.''

ಇಂದ್ರಿಯಗಳು ಸ್ವಾಭಾವಿಕವಾಗಿ ಬಹಿರ್ಮುಖ. ಬಾಹ್ಯ ವಿಷಯಗಳೆಡೆಗೆ ಧಾವಿಸುವ ಅವುಗಳ ಪ್ರವೃತ್ತಿಯನ್ನು ತಡೆದು, ಅವನ್ನು ಅಂತರ್ಮುಖವಾಗಿಸುವುದು, ಆತ್ಮಸಾಕ್ಷಾತ್ಕಾರವನ್ನು ಬಯಸುವ ಸಾಧಕನ ಪಾಲಿನ ದೊಡ್ಡ ಸಮಸ್ಯೆ. ಕಠೋಪನಿಷತ್ತಿನಲ್ಲಿ ಹೇಳಿದ ಹಾಗೆ,

ಪರಾಂಚಿ ಖಾನಿ ವ್ಯತೃಣತ್ ಸ್ವಯಂಭೂ
ಸ್ತಸ್ಮಾತ್ ಪರಾಙ್ ಪಶ್ಯತಿ ನಾಂತರಾತ್ಮನ್ ।
ಕಶ್ಚಿದ್ಧೀರಃ ಪ್ರತ್ಯಗಾತ್ಮಾನಮೈಕ್ಷ-
ದಾವೃತ್ತಚಕ್ಷುರಮೃತತ್ವಮಿಚ್ಛನ್ ॥ (೨.೯.೯.)

'ಭಗವಂತ ಇಂದ್ರಿಯಗಳನ್ನು ಬಹಿರ್ಮುಖವಾಗಿರಿಸಿ ಅವನ್ನು ಕೊಲೆ ಮಾಡಿದಂತಿದೆ. ಆದ್ದರಿಂದ ಅವು ಹೊರಗೇ ಹೋಗುತ್ತಿರುತ್ತವೆ. ಒಳಗೆ ಅಲ್ಲ. ಅಮೃತತ್ವವನ್ನು ಬಯಸುವ ಯಾರೋ ಒಬ್ಬ ಧೀರ ತನ್ನ ಇಂದ್ರಿಯಗಳನ್ನು ಒಳಮುಖವಾಗಿ ತಿರುಗಿಸಿಕೊಳ್ಳುತ್ತಾನೆ ಮತ್ತು ಪ್ರತ್ಯಗಾತ್ಮನನ್ನು ಪಡೆಯಬಯಸುತ್ತಾನೆ.'

ಭಗವದ್ಗೀತೆಯು ಹೇಳುವಂತೆ ಆಮೆಯು ತನ್ನ ಅಂಗಗಳನ್ನು ಒಳಕ್ಕೆ ಎಳೆದುಕೊಳ್ಳುವಂತೆ, ಇಂದ್ರಿಯಗಳನ್ನು ವಿಷಯಗಳಿಂದ ಬಿಡಿಸಿ ಒಳಕ್ಕೆ ಎಳೆದುಕೊಳ್ಳಬೇಕು. ಆದರೆ ಮನುಷ್ಯನ ಜ್ಞಾನೇಂದ್ರಿಯಗಳನ್ನು ಆಮೆಯ ಇಂದ್ರಿಯಗಳ ಹಾಗೆ ಶಬ್ದಶಃ ಒಳಕ್ಕೆ ಎಳೆದುಕೊಳ್ಳಲಾಗದು. ಅವನು ಹೆಚ್ಚೆಂದರೆ ಕಣ್ಣುಗಳನ್ನು ಮುಚ್ಚಬಲ್ಲನು. ಕಿವಿಯಲ್ಲಿ ಹತ್ತಿ ತುರುಕಿಸಿ ಏನೂ ಕೇಳದಂತೆ ಮಾಡಬಲ್ಲನು. ಆದರೆ ಮೂಗು ಮತ್ತು ಚರ್ಮವನ್ನು ಇದೇ ರೀತಿ ವಿಷಯವಸ್ತುಗಳಿಂದ ಮುಚ್ಚಲು ಸಾಧ್ಯವಿಲ್ಲ. ಕೆಲವರು ವಿಷಯಸಂಪರ್ಕಗಳಿಂದ ತಪ್ಪಿಸಿಕೊಳ್ಳಲು ನಿರ್ಜನ ಸ್ಥಳಕ್ಕೆ ಹೋಗುತ್ತಾರೆ. ಇನ್ನು ಕೆಲವರು ಅವಿವೇಕದಿಂದ ಕಠೋರ ತಪವನ್ನು ಮಾಡುತ್ತ ಶರೀರವನ್ನು ಕೃಶಗೊಳಿಸಿ ಇಂದ್ರಿಯಗಳನ್ನು ದುರ್ಬಲಗೊಳಿಸಿಕೊಳ್ಳುತ್ತಾರೆ. ಇದು ಕುದುರೆಗಳನ್ನು ಹೊಡೆದು ಅವನ್ನು ಅರೆಜೀವವಾಗಿಸುವಂತಿದೆ. ಇದು ಇಂದ್ರಿಯನಿಗ್ರಹದ ಸರಿಯಾದ ವಿಧಾನ ಅಲ್ಲ. ಬಹಿರಿಂದ್ರಿಯಗಳು ಮೆದುಳಿನಲ್ಲಿರುವ ಇಂದ್ರಿಯಗಳ ಕೇಂದ್ರಗಳೊಂದಿಗೆ ನರವ್ಯೂಹದಿಂದ ಜೋಡಿಸಲ್ಪಟ್ಟ ಬಾಹ್ಯ ಉಪಕರಣಗಳಷ್ಟೇ. ಮೆದುಳಿನಲ್ಲಿರುವ ಅಂತರಿಂದ್ರಿಯವನ್ನು ಸಂಯಮಕ್ಕೆ ತರುವುದೇ ನಿಜವಾದ ಇಂದ್ರಿಯನಿಗ್ರಹ. ಎಲ್ಲ ಸಂತ ಮಹಾತ್ಮರಲ್ಲಿ ನಾವು ಈ ಬಗೆಯ ನಿಗ್ರಹವನ್ನೇ

ಗಮನಿಸುತ್ತೇವೆ. ಚೈತನ್ಯ ಮಹಾಪ್ರಭುವಿನ ನಾಲಗೆಯ ಮೇಲೆ ಸಕ್ಕರೆಯನ್ನು ಹಾಕಿದರೂ ಅದು ಒದ್ದೆಯಾಗಲಿಲ್ಲ. ಅದು ಗಾಳಿಗೆ ಹಾರಿ ಹೋಯಿತು. ಶ್ರೀರಾಮಕೃಷ್ಣರ ಭಾವಚಿತ್ರದಲ್ಲಿ ಅವರ ನೇತ್ರಗಳು ಅರೆತೆರೆದಿವೆ. ಆದರೆ ಅವರು ಅತ್ಯುಚ್ಚ ಸಮಾಧಿಸ್ಥಿತಿಯಲ್ಲಿದ್ದಾರೆ. ಅವರು ಪೂರ್ಣವಾಗಿ ಬಾಹ್ಯಜ್ಞಾನಶೂನ್ಯರಾಗಿದ್ದಾರೆ. ಇದರ ಅರ್ಥ ಇಂದ್ರಿಯಗಳು ಪ್ರಬಲವಾಗಿ, ಪಟುವಾಗಿದ್ದರೂ ಅವುಗಳ ನಿಗ್ರಹ ಸಾಧ್ಯವಿದೆ. ಮತ್ತು ಅದೇ ನಿಜವಾದ ಅರ್ಥದಲ್ಲಿ ನಿಗ್ರಹ.

ಮನಸ್ಸೆಂಬ ಲಗಾಮು ಹೇಗೆ ಇರಬೇಕು? ಭಗವಂತ ಹೇಳುವಂತೆ ವ್ಯಕ್ತಿ ಮನೋಗತವಾದ ಕಾಮನೆಗಳನ್ನೆಲ್ಲ ತೊರೆದಾಗ ಸ್ಥಿತಪ್ರಜ್ಞನೆಂದು ಕರೆಯಲ್ಪಡುತ್ತಾನೆ. ಮನಸ್ಸಿನಲ್ಲಿ ಒಂದಾದ ಮೇಲೊಂದರಂತೆ ಅಸಂಖ್ಯ ವಿಚಾರಗಳು ಏಳುತ್ತಲೇ ಇರುತ್ತವೆ. ಆದರೆ ಮನಸ್ಸು ವಿಷಯಗಳಲ್ಲಿ ಆಸಕ್ತಿಯನ್ನು ತಾಳಿದಾಗ ಮಾತ್ರ ಕಾಮನೆಗಳು ಹುಟ್ಟುತ್ತವೆ – ಸಂಗಾತ್ ಸಂಜಾಯತೇ ಕಾಮಃ – ಎಂದಂತೆ. ಆಸಕ್ತಿ ಮತ್ತು ರಾಗ ದ್ವೇಷರಹಿತನಾದಾಗ ವ್ಯಕ್ತಿ ವಿಷಯಗಳ ಮಧ್ಯೆಯೂ ಅವಿಚಲನಾಗಿ ಇರುತ್ತಾನೆ. ಮನಸ್ಸಿನಲ್ಲಿ ಒಂದಾದ ಮೇಲೊಂದರಂತೆ ಏಳುವ ಚಿತ್ತವೃತ್ತಿಗಳು ಹಾನಿಕಾರಕವಲ್ಲ. ಆದರೆ ಆಸಕ್ತಿ ಮತ್ತು ರಾಗ ದ್ವೇಷಗಳಿಂದ ಪ್ರೇರಿತನಾಗಿ ವಿಷಯಗಳ ಕಡೆಗೆ ಧಾವಿಸುವುದು ಮತ್ತು ಫಲಾಪೇಕ್ಷೆಯಿಂದ ಕರ್ಮನಿರತನಾಗುವುದು ಬಂಧನಕ್ಕೆ ಕಾರಣ. ಗೀತೆಯಲ್ಲಿ ಅದನ್ನು 'ಸಂಕಲ್ಪ ಪ್ರಭವಾನ್ ಕಾಮಾನ್' ಎಂದು ಕರೆಯಲಾಗಿದೆ. ಶ್ರೇಷ್ಠ ಭಕ್ತ ಅಥವಾ ಗುಣಾತೀತನಾದ ಮುನಿ ತನ್ನ ಮನಸ್ಸಿನಲ್ಲೇಳುವ ವಿಚಾರಗಳನ್ನು ಕಾಮನೆಯಾಗಿ ಪರಿವರ್ತಿತವಾಗಬಿಡುವುದಿಲ್ಲ. ಅವನು ಸರ್ವಾರಂಭ ಪರಿತ್ಯಾಗ, ಸರ್ವಸಂಕಲ್ಪ ಪರಿತ್ಯಾಗ ಮಾಡಿರುತ್ತಾನೆ.

ರಥದ ಲಗಾಮು ಸಾರಥಿಯ ಕೈಯಲ್ಲಿರುತ್ತದೆ. ಸಾರಥಿ ಬುದ್ಧಿಯ ಪ್ರತೀಕ. ಬುದ್ಧಿ ಏಕನಿಷ್ಠವಾಗಿರಬೇಕು. ಬುದ್ಧಿ ಭಗವಂತನಲ್ಲಿ ತದ್ಗತವಾಗಿರಬೇಕು. ತನ್ನ ಕುರಿತಾದ, ಜಗತ್ತಿನ ಕುರಿತಾದ ದೃಷ್ಟಿಯನ್ನೇ ಬುದ್ಧಿ ಎಂದು ಕರೆಯಲಾಗಿದೆ. ಗೀತೆಯಲ್ಲಿ ಸಾಂಖ್ಯಬುದ್ಧಿ ಅಥವಾ ಯೋಗಬುದ್ಧಿ ಎಂದು ಹೇಳಿರುವ ಕಡೆಯಲ್ಲಿ ಆ ಶಬ್ದಗಳನ್ನು ಇದೇ ಅರ್ಥದಲ್ಲಿ ಹೇಳಲಾಗಿದೆ. ಹೆಚ್ಚಿನ ಜನರಿಗೆ ದೇಹದಲ್ಲಿ ಆತ್ಮಬುದ್ಧಿ ಮತ್ತು ಜಗತ್ತಿನ ವಿಷಯದಲ್ಲಿ ಮಮತ್ವಬುದ್ಧಿ ಇರುತ್ತದೆ. ''ನಾನು ದೇಹ, ಜಗತ್ತಿನ ವಿಷಯಗಳು ನನ್ನವು'' ಇದೇ ಅಹಂಕಾರ. ಇದೇ ಬಂಧನಕ್ಕೆ ಕಾರಣ. ಆದ್ದರಿಂದ ಮನಸ್ಸು ಇಂದ್ರಿಯಗಳ ಮೂಲಕ ವಿಷಯಗಳೆಡೆಗೆ ಧಾವಿಸುತ್ತದೆ. ಆದರೆ ನಾನು ದೇಹವಲ್ಲ, ನಿತ್ಯ, ಅಮರ ಆತ್ಮ, ಬಾಹ್ಯ ಜಗತ್ತಿನ ಆಸೆ ಆಕಾಂಕ್ಷೆಗಳೆಲ್ಲ ಕ್ಷಣಭಂಗುರ, ಎಂದು ಅರಿತಾಗ ಮನಸ್ಸು ಶಾಂತವಾಗುತ್ತದೆ. ಆಗ ಇಂದ್ರಿಯಗಳೂ ಸಹಜವಾಗಿ ಅಂತರ್ಮುಖವಾಗುತ್ತವೆ.

ಇದರ ಅರ್ಥ ಇಂದ್ರಿಯಗಳು ಪಟುವಾಗಿದ್ದು, ಬಲಿಷ್ಠವಾಗಿರಬೇಕು. ಆದರೆ ಸಂಯಮದಲ್ಲಿರಬೇಕು. ಮನಸ್ಸು ಸಂಕಲ್ಪಗಳು ಮತ್ತು ರಾಗದ್ವೇಷಗಳಿಂದ ರಹಿತವಾಗಿರಬೇಕು. ಬುದ್ಧಿ ಅಹಂಕಾರ – ಮಮಕಾರಗಳಿಂದ ಪಾರಾಗಿರಬೇಕು. ಇಂತಹ ಇಂದ್ರಿಯ – ಮನಸ್ಸುಗಳಿಂದ ಕೂಡಿದವನು ತನ್ನ ಗುರಿಯನ್ನು ಸಾಧಿಸುತ್ತಾನೆ. ಆ ಗುರಿಯನ್ನು ವಿಷ್ಣುವಿನ ಪರಮಪದ – ಎಂದು ಕರೆಯಲಾಗಿದೆ: *(೧.೩.೯)*

**ವಿಜ್ಞಾನಸಾರಥಿರ್ಯಸ್ತು ಮನಃ ಪ್ರಗ್ರಹವಾನ್ನರಃ ।**
**ಸೋಽಧ್ವನಃ ಪಾರಮಾಪ್ನೋತಿ ತದ್ವಿಷ್ಣೋಃ ಪರಮಂ ಪದಮ್ ॥**

ಭಗವದ್ಗೀತೆಯ ಪ್ರಕಾರ ಕಾಮನೆಗಳನ್ನು ತೊರೆಯುವವನು, ಅಹಂಕಾರ ಮಮಕಾರಗಳಿಂದ ರಹಿತನಾಗಿರುವವನು ಶಾಂತಿಯನ್ನು ಪಡೆಯುತ್ತಾನೆ:

**ವಿಹಾಯ ಕಾಮಾನ್ ಯಃ ಸರ್ವಾನ್ ಪುಮಾಂಶ್ಚರತಿ ನಿಸ್ಪೃಹಃ ।**
**ನಿರ್ಮಮೋ ನಿರಹಂಕಾರ ಸ ಶಾಂತಿಮಧಿಗಚ್ಛತಿ ॥**

ಇದನ್ನೇ ಬ್ರಾಹ್ಮೀಸ್ಥಿತಿ ಎಂದು ಕರೆಯಲಾಗಿದೆ. ಈ ಸ್ಥಿತಿಯನ್ನು ಪಡೆದ ಜ್ಞಾನಿಯನ್ನು ಸ್ಥಿತಪ್ರಜ್ಞನೆಂದು ಕರೆಯಲಾಗುತ್ತದೆ. ಹೀಗೆ ಗೀತೆಯ ರಥವು ಗೀತೆಯ ಸಂದೇಶವಾದ 'ಸ್ಥಿತಪ್ರಜ್ಞದರ್ಶನ'ವನ್ನು ಸಾರುತ್ತಿದೆ.

### ಪಾರ್ಥಸಾರಥಿ ಶ್ರೀಕೃಷ್ಣ

ಗೀತೆ ಮತ್ತು ಕಠೋಪನಿಷತ್ತಿನ ನೆರವಿನಿಂದ ನಮಗೆ ರಥದ ಆಧ್ಯಾತ್ಮಿಕ ಅರ್ಥ ಮನವರಿಕೆಯಾಗುತ್ತದೆ. ಇಲ್ಲಿ ಶ್ರೀಕೃಷ್ಣನು ಸಾರಥಿಯ ಸ್ಥಾನದಲ್ಲಿರುವುದು ಬಹಳ ವಿಶೇಷವಾದುದು. ಸ್ವಾಮಿ ವಿವೇಕಾನಂದರು ನಮ್ಮ ಗಮನವನ್ನು ಆ ವಿಷಯದ ಕಡೆಗೆ ಸೆಳೆಯುತ್ತಾರೆ. ಬದ್ಧ ಜೀವದ ಪ್ರತಿನಿಧಿಯಾದ ವಿಷಾದಗ್ರಸ್ತ ಅರ್ಜುನನಿಗೆ ಶ್ರೀಕೃಷ್ಣ ಮಾರ್ಗದರ್ಶನ ಮಾಡುತ್ತಿದ್ದಾನೆ. ಧರ್ಮರಥದಲ್ಲಿ ಶ್ರೀ ತುಲಸೀದಾಸರು ''ಈಸ ಭಜನು ಸಾರಥಿ ಸುಜಾನ'' – ಈಶ ಭಜನೆಯಲ್ಲಿ ನಿರತನಾದ ವಿವೇಕಿ ಸಾರಥಿ ಇರುವಲ್ಲಿ ಚಿಂತೆಯ ಮಾತೇ ಇಲ್ಲ ಎಂದಿರುವರು. ಯಾವ ರಥಕ್ಕೆ ಸಾಕ್ಷಾತ್ ಭಗವಂತನೇ ಸಾರಥಿಯಾಗಿ ದ್ದಾನೆಯೋ ಅವನ ಭಾಗ್ಯವನ್ನೇನು ಕೇಳುತ್ತೀರಿ?

ಭಗವಂತನೇ ಸಾರಥಿಯಾಗಿರುವುದು ಇನ್ನೊಂದು ದೃಷ್ಟಿಯಿಂದ ಮಹತ್ವಪೂರ್ಣವಾದುದು. ಭಗವಂತ ಕೇವಲ ಸ್ಥಿತಪ್ರಜ್ಞ ಅಥವಾ ವಿಷ್ಣುವಿನ ಪರಮಪದದಲ್ಲಿ ನೆಲೆನಿಂತ ಯೋಗಿ ಅಲ್ಲ. ಅವನು ಸಾಕ್ಷಾತ್ ವಿಷ್ಣು. ಭಗವಂತ ಸಾರಥಿಯಾಗಿರುವುದು ಸ್ಥಿತಪ್ರಜ್ಞತ್ವಕ್ಕಿಂತ ಹೆಚ್ಚಿನದೇನನ್ನೋ ಹೇಳುತ್ತಿದೆ. ಒಬ್ಬ ಮುನಿ ಸ್ಥಿತಪ್ರಜ್ಞನಾದ ತರುವಾಯ ಇತರರನ್ನು ಉದ್ಧರಿಸಲು ಯತ್ನಿಸಬೇಕು. ಶ್ರೀರಾಮಕೃಷ್ಣರು ನಿರ್ವಿಕಲ್ಪ ಸಮಾಧಿಯಲ್ಲೇ ಇರಬಯಸಿದ ನರೇಂದ್ರನಿಗೆ ಈ ಮಾತನ್ನು ನೆನಪಿಸಿದ್ದರು. ನರೇಂದ್ರನು ದುಃಖಸಂತಪ್ತ ಮಾನವತೆಗೆ ದೊಡ್ಡ ವಟವೃಕ್ಷದಂತೆ ಆಶ್ರಯ ನೀಡುವಂತಾಗಲೆಂಬುದು ಅವರ ಬಯಕೆಯಾಗಿತ್ತು. ಇದೇ ಭಾವವನ್ನು ಈ ಕೆಳಗಿನ ಶ್ಲೋಕದಲ್ಲಿ ಬಹಳ ಸುಂದರವಾಗಿ ವ್ಯಕ್ತಪಡಿಸಲಾಗಿದೆ:

**ದುರ್ಜನಃ ಸಜ್ಜನೋ ಭೂಯಾತ್ ಸಜ್ಜನಃ ಶಾಂತಿಮಾಪ್ನುಯಾತ್ ।**
**ಶಾಂತೋ ಮುಚ್ಯೇತ ಬಂಧೇಭ್ಯೋ ಮುಕ್ತಶ್ಚಾನ್ಯಾನ್ ವಿಮೋಚಯೇತ್ ॥**

'ದುರ್ಜನರು ಸಜ್ಜನರಾಗಲಿ, ಸಜ್ಜನರು ಶಾಂತಿಯನ್ನು ಪಡೆಯಲಿ, ಶಾಂತನು ಬಂಧಮುಕ್ತನಾಗಲಿ, ಬಂಧಮುಕ್ತರು ಇತರರ ಮುಕ್ತಿಗಾಗಿ ಪ್ರಯತ್ನಿಸಲಿ.' ನಮ್ಮ ಕೃಷ್ಣಾರ್ಜುನ ರಥದಲ್ಲಿ ಅರ್ಜುನನು ಸಜ್ಜನನನ್ನು ಪ್ರತಿನಿಧಿಸುತ್ತಾನೆ. ಕೃಷ್ಣ ಅವನನ್ನು ಮೋಕ್ಷಪಥಕ್ಕೆ ಕರೆದೊಯ್ಯುವ ಮುಕ್ತಾತ್ಮ.

ಶ್ರೀಕೃಷ್ಣನನ್ನು ವರ್ಣಿಸುತ್ತ ಸ್ವಾಮಿ ವಿವೇಕಾನಂದರು ಹೇಳುತ್ತಾರೆ, ''ಶ್ರೀಕೃಷ್ಣನು ಒಂದು ಕೈಯಲ್ಲಿ ಲಗಾಮನ್ನು ಹಿಡಿದುಕೊಂಡು ಇನ್ನೊಂದು ಕೈಯಲ್ಲಿ ಕುದುರೆಗಳ ಹಗ್ಗವನ್ನು ಹಿಡಿದು, ಅರ್ಜುನನ

ಕಡೆಗೆ ಸ್ವಲ್ಪ ತಿರುಗಿ ನೋಡುತ್ತಿದ್ದಾನೆ. ಅವನ ಆ ಶಿಶುಸರಳ ಮುಖ ಭಾವವು ಅಲೌಕಿಕ ಪ್ರೇಮ ಮತ್ತು ಸಹಾನುಭೂತಿಯಿಂದ ದೀಪ್ತ ವಾಗಿದೆ.''

ಶ್ರೀಕೃಷ್ಣನ ಮುಖದಲ್ಲಿ ನಾವು ಶಿಶುಸಹಜ ಸರಳತೆಯನ್ನು ನೋಡುತ್ತೇವೆ. ಸಾಮಾನ್ಯವಾಗಿ ವ್ಯಕ್ತಿ ಬಾಲ್ಯದಿಂದ ಯೌವನಕ್ಕೆ ಕಾಲಿಟ್ಟಾಗ ಅವನ ಬಾಲ್ಯದ ಸರಳತೆ ಹೊರಟುಹೋಗುತ್ತದೆ. ಅದರ ಜಾಗವನ್ನು ಅರಿವು, ಪ್ರಬುದ್ಧತೆ ತುಂಬಿಕೊಳ್ಳುತ್ತದೆ. ಸಂತಪುರುಷನಲ್ಲಿ ಮಾತ್ರ ವಯಸ್ಸಾದ ಮೇಲೂ ಪ್ರಬುದ್ಧತೆಯೊಂದಿಗೆ ಸರಳತೆಯೂ ಮಿಳಿತವಾಗಿರುತ್ತದೆ. ಜ್ಞಾನಿ ಮತ್ತು ಪರಮಹಂಸರಿಬ್ಬರೂ ಬಾಲಕನಂತಿರುತ್ತಾರೆ. ಶ್ರೀಕೃಷ್ಣನೂ ಅಂತಹ ಜ್ಞಾನಿ – ಅವನು ಯಾದವ ರಾಜಕುಮಾರನಾಗಿಯೂ, ಯೋಧ ಮತ್ತು ಮುತ್ಸದ್ದಿಯಾಗಿಯೂ ವೃಂದಾವನದ ಮುಗ್ಧ ಗೋಪಬಾಲಕನೇ ಆಗಿದ್ದನು. ಅವನ ಆ ಸರಳತೆಯು ಯುದ್ಧಭೂಮಿಯಲ್ಲಿ ಅಂತಹ ಗಂಭೀರ ಸನ್ನಿವೇಶದಲ್ಲೂ ಎದ್ದು ಕಾಣುತ್ತಿದೆ. ರಣರಂಗದಲ್ಲಿ ಅರ್ಜುನ ಆಕಸ್ಮಿಕವಾಗಿ ಕಾರ್ಪಣ್ಯದೋಷದಿಂದ ಅಪಹೃತಚಿತ್ತನಾಗಿ ಯುದ್ಧವಿಮುಖನಾಗ ಹೊರಟ ವಿಷಮ ಸನ್ನಿವೇಶದಲ್ಲೂ ಅವನ ಮುಖದ ಮಂದಹಾಸ ಮರೆಯಲಾಗಲಿಲ್ಲ. ಅವನು 'ಪ್ರಹಸನ್ನಿವ'ನಾಗಿಯೇ ಇದ್ದನು ಎಂದು ಮಹಾಭಾರತಕಾರರು ಹೇಳುತ್ತಾರೆ.

ಶ್ರೀಕೃಷ್ಣನ ಮುಖದಲ್ಲಿ ಅಹೇತುಕ ಪ್ರೇಮ ಮತ್ತು ಸಹಾನುಭೂತಿ ಎದ್ದು ಕಾಣುತ್ತದೆ. ಒಬ್ಬ ಬಾಲಕ ಮಾತ್ರ ನಿಜವಾದ ಸಹಾನುಭೂತಿಯನ್ನು ತೋರಬಲ್ಲನು. ಅವನ ಸರಳ ಮನಸ್ಸಿನಲ್ಲಿ 'ಒಳಗೊಂದು ಹೊರಗೊಂದು' ಇರುವುದಿಲ್ಲ. ಪ್ರಾಪಂಚಿಕರ ಕೃತ್ರಿಮತೆ ಇರುವುದಿಲ್ಲ. ಬಾಲಕ ಬಹಳ ಸಂವೇದನಾಶೀಲನಾಗಿರುತ್ತಾನೆ. ಅವನು ತನ್ನ ಮಿತ್ರರು ಅಳುತ್ತಿದ್ದರೆ ತಾನೂ ಅಳುತ್ತಾನೆ, ಒಂದು ಅಳುವ ಮಗು ಆಟವಾಡುತ್ತಿರುವ ತನ್ನ ಮಿತ್ರರನ್ನು ನೋಡಿ ಅಳುವುದನ್ನು ನಿಲ್ಲಿಸುತ್ತಾನೆ. ಶ್ರೀಮಾತೆಯವರ ಜೀವನದಲ್ಲಿ ಒಂದು ಸುಂದರ ಉದಾಹರಣೆಯನ್ನು ನೋಡುತ್ತೇವೆ. ಜಯರಾಂಬಾಟಿಯಲ್ಲಿ ಒಬ್ಬ ಕೆಲಸದಾಳು ಶ್ರೀಮಾತೆಯವರಿಗೆ ಸಾಮಾನು ಇತ್ಯಾದಿಗಳನ್ನು ತಂದುಕೊಡುತ್ತಿದ್ದಳು. ಒಂದು ಸಲ ಬಹಳ ದಿನಗಳವರೆಗೆ ಅವಳು ಬರಲೇ ಇಲ್ಲ. ಕೊನೆಗೊಂದು ದಿನ ಅವಳು ಬಂದಳು. ಅವಳು ಬರುತ್ತಲೇ ಶ್ರೀಮಾತೆಯವರು ಅವಳು ಇಷ್ಟು ದಿನ ಯಾಕೆ ಬರಲಿಲ್ಲ ಎಂದು ವಿಚಾರಿಸಿಕೊಂಡರು. ಅವಳು ಕುಸಿದು ಕುಳಿತು ಒಂದೇ ಸಮನೆ ಅಳತೊಡಗಿದಳು. ಕೆಲ ದಿನಗಳ ಹಿಂದೆ ಅವಳ ಯುವಕ ಮಗ ತೀರಿಕೊಂಡ ವಿಷಯವನ್ನು ತಿಳಿಸಿದಳು. ಅದನ್ನು ಕೇಳಿದುದೇ ತಡ, ಶ್ರೀಮಾತೆ ಅಳತೊಡಗಿದರು. ಇಬ್ಬರೂ ಒಟ್ಟಿಗೆ ಬಹಳ ಅತ್ತರು. ಶ್ರೀಮಾತೆಯವರ ಈ ಸಹಜ, ಸರಳ ನಿಷ್ಕಪಟ ಭಾವನೆ ಮತ್ತು ಸಹಾನುಭೂತಿಯು ಆ ವೃದ್ಧೆಗೆ ಅದೆಷ್ಟು ಸಾಂತ್ವನವನ್ನು ನೀಡಿರಬಹುದೆಂದು ನಾವು ಊಹಿಸಬಹುದು. ಜನರ ದುಃಖಭಾರವನ್ನು ತಾವು ಅನುಭವಿಸಿ ಅವರ ಮನಸ್ಸನ್ನು ಹಗುರಗೊಳಿಸುವ ಈ ವಿಶೇಷ ಗುಣವನ್ನು ನಾವು ಶ್ರೀರಾಮಕೃಷ್ಣರಲ್ಲೂ ನೋಡುತ್ತೇವೆ.

ಶ್ರೀಕೃಷ್ಣನ ಮುಖದಲ್ಲಿ ನಾವು ಗಗನದಂತಹ ಗಾಂಭೀರ್ಯ ಮತ್ತು ಶಾಂತಿಯನ್ನು ನಾವು ನೋಡುತ್ತೇವೆ. ಶಾಂತಿಯನ್ನು ಮತ್ತು ಗಾಂಭೀರ್ಯವನ್ನು ನಾವು ಒಂದು ಮಗುವಿನಲ್ಲಿ ನೋಡಲು ಸಾಧ್ಯವಿಲ್ಲ. ಬಾಲಕ ಸ್ವಭಾವತಃ ಚಂಚಲನಾಗಿರುತ್ತಾನೆ. ಮಕ್ಕಳಿಗೆ ಸುಮ್ಮನೆ ಕುಳಿತುಕೊಳ್ಳುವುದು ಬಹಳ ಕಷ್ಟ ಕೂಡ. ಮಕ್ಕಳು ಸುಮ್ಮನೆ ಕುಳಿತರೂ ಮನಸ್ಸಿನಲ್ಲೇ ಸುಮ್ಮನೆ ಕುಳಿತ ಕೋತಿಗಳು ಬಾಳೆಯ ತೋಟಕ್ಕೆ ಲಗ್ಗೆ ಹಾಕುವ ಯೋಜನೆ ಹುಡುಕುತ್ತಿರುವಂತೆ – ಇನ್ನಾವುದೋ ತುಂಟತನಕ್ಕೆ ಹೊಂಚುಹಾಕುತ್ತಿರುತ್ತಾರೆ. ಮಕ್ಕಳಿಗೆ ಸುಮ್ಮನೆ ಕುಳಿತುಕೊಳ್ಳುವುದು ದೊಡ್ಡ ಶಿಕ್ಷೆ. ಆದರೆ ಜ್ಞಾನಿ ಹಾಗಲ್ಲ. ಅವನು ಸಾಗರದ ಅಲೆಗಳ ಹಾಗೆ ನಿರಂತರ ಕರ್ಮಶೀಲನಾಗಿದ್ದರೂ, ಅಂತರಂಗದಲ್ಲಿ ಸಮುದ್ರದ ಆಳ-ಗಾಂಭೀರ್ಯಗಳಿಂದ ತುಂಬಿಕೊಂಡಿರುತ್ತಾನೆ. ಸಮುದ್ರ ಎಷ್ಟು ಆಳವಾಗಿರುತ್ತದೆಯೋ ಅಷ್ಟು ಎತ್ತರೆತ್ತರದ ಅಲೆಗಳು ಏಳುತ್ತವೆ. ಜ್ಞಾನಿಯೂ ಹೊರಗಡೆ ನಿರಂತರ ಕರ್ಮಶೀಲನಾಗಿದ್ದರೂ ಅವನಲ್ಲಿ ಆಳವಾದ ಶಾಂತಿ ಮನೆಮಾಡಿರುತ್ತದೆ. ಸ್ವಾಮಿ ವಿವೇಕಾನಂದರ ಪ್ರಕಾರ ಇದು ಗೀತೆಯ ಒಂದು ಮುಖ್ಯ ಸಂದೇಶವೂ ಹೌದು.

**ಕರ್ಮಣ್ಯಕರ್ಮ ಯಃ ಪಶ್ಯೇತ್ ಅಕರ್ಮಣಿ ಚ ಕರ್ಮ ಯಃ ।**
**ಸ ಬುದ್ಧಿಮಾನ್ ಮನುಷ್ಯೇಷು ಸ ಯುಕ್ತಃ ಕೃತ್ಸ್ನಕರ್ಮಕೃತ್ ॥**

'ಕರ್ಮ ಮಾಡುವಾಗ ಯಾರ ಮನಸ್ಸು ಶಾಂತವಾಗಿರುತ್ತದೆಯೋ, ಮತ್ತು ಯಾರಲ್ಲಿ ಬಾಹ್ಯ ಚಟುವಟಿಕೆಗಳು ಇರಲಿ ಅಥವಾ ಇಲ್ಲದಿರಲಿ ಬ್ರಹ್ಮ ಚಿಂತನೆಯೆಂಬ ಮಹಾನ್ ಕರ್ಮವು ನಿರಂತರ ನಡೆಯುತ್ತಿರುತ್ತದೆಯೋ ಅವನೇ ಮನುಷ್ಯರಲ್ಲಿ ಬುದ್ಧಿವಂತನು, ಯೋಗಿಯು ಮತ್ತು ಕರ್ಮರಹಸ್ಯವನ್ನು ಬಲ್ಲವನು.'

ಸಮುದ್ರವನ್ನು ನದಿಗಳು ನಿರಂತರವಾಗಿ ಸೇರುತ್ತಿದ್ದರೂ, ಅದು ತನ್ನ ಸೀಮೆಗಳನ್ನು ದಾಟದೆ 'ಅಚಲಂ ಪ್ರತಿಷ್ಠಂ' ಆಗಿರುತ್ತದೆ. ಆದರೆ ಶ್ರೀಕೃಷ್ಣನ ಕರುಣೆಯ ಸಾಗರವು ಸಮವಾಗಿದ್ದೂ, ತನ್ನ ಮೇರೆಗಳನ್ನು ದಾಟಿ ಭೋರ್ಗರೆಯುತ್ತಿದೆ. ಅವನಲ್ಲಿ ಆನಂದ ಮತ್ತು ಪ್ರೇಮದ ಸಮುದ್ರವು ಮೇರೆ ಮೀರಿ ಹರಿಯುತ್ತಿದೆ. ಅಲ್ಲಿ ಕಾಮನೆಗಳು ಮತ್ತು ವಿಷಯಾನುಭವಗಳೆಂಬ ಪ್ರವಾಹಗಳು ನದಿಗಳಂತೆ ಬಂದು ಅವನನ್ನು ಸೇರುತ್ತಿದ್ದರೂ ಅವನು ಸ್ವಲ್ಪವೂ ವಿಚಲಿತನಾಗುವುದಿಲ್ಲ. ಅವನ ಅಹೇತುಕ ಪ್ರೇಮದ ಪ್ರವಾಹವು ಶೋಕತಾಪ ಸಂತಪ್ತ ಜಗತ್ತಿಗೆ ಶಾಂತಿವಾರಿಯನ್ನು ವರ್ಷಿಸುತ್ತಿದೆ.

ಹೀಗೆ ಜ್ಞಾನಿಯ ಲಕ್ಷಣಗಳನ್ನು ವಿವರಿಸಲು ಇರುವ ಹೋಲಿಕೆಗಳೆಲ್ಲ ಅಪೂರ್ಣವಾದವುಗಳೇ ಎಂದು ನಾವು ಗಮನಿಸಬಹುದು. ಜ್ಞಾನಿ ಬಾಲಕನಂತೆ ಸರಳನಾಗಿರುತ್ತಾನೆ, ಆದರೆ ಚಂಚಲನಾಗಿರುವುದಿಲ್ಲ. ಅವನು ಸಮುದ್ರದಂತೆ ಶಾಂತನಾಗಿರುತ್ತಾನೆ, ಆದರೆ ಅವನ ಪ್ರೇಮದ ಪ್ರವಾಹಕ್ಕೆ ಸೀಮೆಗಳೇ ಇಲ್ಲ. ರಥಾರೂಢನಾದ ಪಾರ್ಥಸಾರಥಿ ಶ್ರೀಕೃಷ್ಣನ ಚಿತ್ರವು ಒಂದು ಪರಿಪೂರ್ಣ ಜೀವನಾದರ್ಶವನ್ನು ಪ್ರತಿನಿಧಿಸುತ್ತದೆ. ಅದು ಅರ್ಜುನನೆಂಬ ವಿಷಾದಗ್ರಸ್ತ ಜೀವಾತ್ಮನಿಗೆ ಧೈರ್ಯ-ಭರವಸೆಯ ಸಂದೇಶವೀಯುವಂತೆ, ಬ್ರಹ್ಮಜ್ಞಾನಾಪೇಕ್ಷಿಯಾದ ಜಿಜ್ಞಾಸುವಿಗೆ ಸಾಧನೆಯ ರಹಸ್ಯವನ್ನು ತಿಳಿಯಪಡಿಸುತ್ತದೆ. ಸಾಧಕನು ಸದಾ ತನ್ನ ಇಂದ್ರಿಯ, ಮನಗಳನ್ನು ಹತೋಟಿಯಲ್ಲಿಟ್ಟು, ಬುದ್ಧಿಯನ್ನು ಶುದ್ಧವಾಗಿಸಿಕೊಂಡು, ಭಗವತ್ಕೃಪೆಯಿಂದ ಮೋಕ್ಷವೆಂಬ ಗುರಿಯನ್ನು ಸಾಧಿಸಬೇಕು; ಇತರರಿಗೂ ಮೋಕ್ಷವನ್ನು ಪಡೆಯಲು ಸಹಾಯ ಮಾಡಬೇಕು ಎಂಬುದನ್ನು ಶ್ರೀಕೃಷ್ಣನ ರಥ ನೆನಪಿಸಿಕೊಡುತ್ತದೆ.

# ಮೀನಾ ಅಮ್ಮ

## ಭವಿಷ್ಯ ನುಡಿ

ಮೂಲ : 'Swami Vivekananda: The Great Inspirer', ರಾಮಕೃಷ್ಣ ಶಾರದಾ ಮಿಷನ್ ಪ್ರಕಟಣೆ ಅನುವಾದ : ಸ್ವರ್ಣಗೌರಿ

ಮಲಬಾರ್‌ನಲ್ಲಿ ಬಹುಪಾಲು ಜನರು ಹರಿಜನ ಪಂಗಡಕ್ಕೆ ಸೇರಿದವರು. ಆಗಿನ ಕಾಲದಲ್ಲಿ ಹರಿಜನರನ್ನು ಜಾತಿಭ್ರಷ್ಟರೆಂದು ಪರಿಗಣಿಸುತ್ತಿದ್ದರು. ಅವರುಗಳು ರಸ್ತೆಯಲ್ಲಿ ಓಡಾಡುವಂತಿರಲಿಲ್ಲ. ಪಲ್ಲಕ್ಕಿ ಹೊರುವವರು ಶಬ್ದ ಮಾಡಿದ ಕೂಡಲೇ ದೃಷ್ಟಿಗೆ ಗೋಚರವಾಗದಷ್ಟು ದೂರ ಓಡಬೇಕಾಗಿತ್ತು, ಇಲ್ಲವೇ ಕಠಿಣತಮ ಶಿಕ್ಷೆಗೆ ಒಳಗಾಗುತ್ತಿದ್ದರು. ದೇವಸ್ಥಾನಕ್ಕೆ ಪ್ರವೇಶಿಸುವುದಾಗಲಿ, ದೇವಸ್ಥಾನದ ಕೊಳವನ್ನು ಉಪಯೋಗಿಸುವುದಾಗಲಿ ನಿಷಿದ್ಧ. ಸ್ತ್ರಿಯರು ಮತ್ತಷ್ಟು ಶೋಷಣೆಗೆ ಒಳಗಾಗುತ್ತಿದ್ದರು. ಶರೀರದ ಮೇಲ್ಭಾಗವನ್ನು ಬಟ್ಟೆಯಿಂದ ಮುಚ್ಚಿಕೊಳ್ಳುವುದಾಗಲಿ, ಚಿನ್ನಬೆಳ್ಳಿಯ ಆಭರಣಗಳನ್ನು ಧರಿಸುವುದಾಗಲಿ ನಿಷಿದ್ಧವಾಗಿತ್ತು. ವಿದ್ಯಾರ್ಜನೆಯಂತೂ ಬಹುದೂರದ ಮಾತು.



ಸ್ವಾಮಿ ವಿವೇಕಾನಂದರು ಎರ್ನಾಕುಳಂ ಬಿಟ್ಟು ಏಳು ದಿನಗಳ ನಂತರ ಹಡಗಿನಲ್ಲಿ ತಿರುವನಂತಪುರವನ್ನು ತಲುಪಿದರು. ಆಗಿನ ಕಾಲದಲ್ಲಿ ಅದೊಂದೇ ದಾರಿ. ಎರಡನೇ ದಿನ ಆಲೆಪ್ಪಿ ತಲುಪಿದರು. ಹಡಗು ದಡ ತಲುಪಿದರೂ ಸ್ವಾಮೀಜಿಯವರ ಆರೋಗ್ಯ ಚೆನ್ನಾಗಿರದ ಕಾರಣ ಕೋಣೆಯಿಂದ ಹೊರಗೆ ಬರಲಾಗಲಿಲ್ಲ. ಕೂಡಲೇ ಯಜಮಾನ ಮಕ್‌ಬೂಲ್ ಅದೆಲ್ಲಿಂದಲೋ ಒಂದು ಲೋಟ ಬಿಸಿ ಹಾಲು ತಂದಿಟ್ಟ. ರಾತ್ರಿ ಹೆಚ್ಚಿದಂತೆ ಅವರ ಉಸಿರಾಟದ ತೊಂದರೆ ಹೆಚ್ಚಾಯಿತು. ಬೆಳಕು ಹರಿಯುತ್ತಲೇ ಮಕ್‌ಬೂಲ್‌ನು ವೈದ್ಯರನ್ನು ಅರಸುತ್ತಾ ಅಲೆದನು. ಎಲ್ಲಾ ಅಂಗಡಿಗಳು ಮುಚ್ಚಿದ್ದರೂ ಸಹ ಮಕ್‌ಬೂಲ್‌ನು ವೈದ್ಯರಿದ್ದಾರೆಯೇ ಎಂದು ಕೇಳುತ್ತಾ ಹತ್ತಿರದಲ್ಲೇ ಇದ್ದ ಒಂದು ಮನೆಗೆ ಸ್ವಾಮೀಜಿಯವರನ್ನು ಕರೆದೊಯ್ದನು. ಆ ಮನೆಯ ಯಜಮಾನನು ಕುಳಿತುಕೊಳ್ಳಲು ಇವರಿಗೆ ಆಸನವಿತ್ತು ಕಾಯಿಲೆ ಗುಣಪಡಿಸುವುದಾಗಿ ಆಶ್ವಾಸನೆಯಿತ್ತನು. ಆತನ ಎಂಟು ವರ್ಷದ ಮಗಳು ಮೀನಾ ಜೇನುತುಪ್ಪ ಬೆರೆಸಿದ ಬಿಸಿಹಾಲನ್ನು ತಂದಿಟ್ಟು ಸ್ವೀಕರಿಸಬೇಕೆಂದು ಬಿನ್ನವಿಸಿಕೊಂಡಳು. ಅದನ್ನು ಕುಡಿದ ಸ್ವಾಮೀಜಿ ಸ್ವಲ್ಪಹೊತ್ತಿನಲ್ಲೇ ಚೇತರಿಸಿಕೊಂಡರು. ಯಜಮಾನರಿಗೆ ಕೃತಜ್ಞತೆ ಅರ್ಪಿಸುತ್ತಾ ಸ್ವಾಮೀಜಿ, ''ನಿಮ್ಮ ಮಗಳು ಬಹಳ ಬುದ್ಧಿವಂತೆ. ಅಕೆಗೆ ವಿದ್ಯಾಭ್ಯಾಸ ಕೊಡಿಸಿರಿ'' ಎಂದರು.

ಈ ಮಾತನ್ನು ಕೇಳಿದ ಕೂಡಲೇ ಯಜಮಾನರು ಸ್ವಾಮೀಜಿಯವರ ಕೈಗಳನ್ನು ಗಟ್ಟಿಯಾಗಿ ಹಿಡಿದುಕೊಂಡು ತನ್ನ ಅಸಹಾಯಕ ಪರಿಸ್ಥಿತಿಯನ್ನು ಹೀಗೆಂದು ತೋಡಿಕೊಂಡನು: ''ನಾವು ಜಾತಿಭ್ರಷ್ಟರು; ರಸ್ತೆಯಲ್ಲಿ ಓಡಾಡುವಂತಿಲ್ಲ, ದೇವಸ್ಥಾನಗಳಿಗೆ ಪ್ರವೇಶವಿಲ್ಲ. ಕಾಯಿಲೆಯಾದಾಗ ವೈದ್ಯರು ನಮ್ಮೆಡೆಗೆ ಔಷಧಿಯನ್ನು ಎಸೆಯುತ್ತಾರೆ. ಯಾರೂ ನಮ್ಮನ್ನು ಸ್ಪರ್ಶಿಸರು. ಇಂತಹ ಪರಿಸ್ಥಿತಿಯಲ್ಲಿ ನಮ್ಮ ಮಕ್ಕಳು ಹೇಗೆ ಶಿಕ್ಷಣ ಪಡೆಯಲು ಸಾಧ್ಯ? ದಯವಿಟ್ಟು ನೀವೇ ಅವರನ್ನು ಆಶೀರ್ವದಿಸಿ.''

ಈ ವೃತ್ತಾಂತ ಕೇಳಿದ ಸ್ವಾಮೀಜಿಯವರ ಮುಖ ಕಪ್ಪಿಟ್ಟಿತು. ಆ ಬಾಲಕಿಯ ತಲೆಯ ಮೇಲೆ ಕೈಯಿಟ್ಟು ಹೃತ್ಪೂರ್ವಕ ಆಶೀರ್ವದಿಸಿದರು. ಈ ದಿವ್ಯ ಸಂತನ ಆಶೀರ್ವಾದ ವ್ಯರ್ಥವಾಗುವುದೇ? ಅಯ್ಯನ್‌ಕಾಳಿ (ಸಮಾಜ ಸುಧಾರಕ) ಸಹಾಯದಿಂದ ಮೀನಾ ಕ್ರೈಸ್ತ ಮಿಷನರಿ ಶಾಲೆಯಲ್ಲಿ ಸ್ಥಳ ದೊರೆಯಿತು. ಬಹಳ ಚುರುಕು ಬುದ್ಧಿಯ ಮೀನಾ ವಿದ್ಯಾಭ್ಯಾಸ ಮುಗಿಸಿ ಕೊಚ್ಚಿನ್‌ನ ಒಂದು ಹರಿಜನರ ಶಾಲೆಯಲ್ಲಿ ಅಧ್ಯಾಪಕಿಯಾದಳು. ಅಯ್ಯನ್‌ಕಾಳಿಯ ಸಮಾಜ ಸುಧಾರಣಾ ಕಾರ್ಯಗಳಲ್ಲಿ ತನ್ನನ್ನು ಸಕ್ರಿಯವಾಗಿ ತೊಡಗಿಸಿಕೊಂಡಳು. ಹರಿಜನ ಸ್ತ್ರೀಯರಿಗೆ ಮೈತುಂಬ ಬಟ್ಟೆ ಹಾಕಿಕೊಳ್ಳಲು ಪ್ರೇರೇಪಿಸಿದಳು, ಕೊರಳಿಗೆ ಕಲ್ಲಿನ ಮಾಲೆ ಧರಿಸುವ ಪದ್ಧತಿಯನ್ನು ರದ್ದುಗೊಳಿಸಿದಳು ಮತ್ತು ಸುಪ್ರಸಿದ್ಧ ವೈಕ್ಕಂ ಸತ್ಯಾಗ್ರಹ (ಜಾತಿಯ ಆಧಾರದ ಮೇರೆಗೆ ದೇವಸ್ಥಾನ ಪ್ರವೇಶ ನಿಷೇಧದ ವಿರುದ್ಧ ಚಳುವಳಿ)ದಲ್ಲಿ ಸಕ್ರಿಯವಾಗಿ ಭಾಗವಹಿಸಿದಳು.

ಮುಂದೆ ಮೀನಾ ತನ್ನ ಜೀವನದಲ್ಲಾದ ಮಹತ್ತರ ಬದಲಾವಣೆಗಳನ್ನು ಕುರಿತು ಗದ್ಗದ ಕಂಠದಿಂದ, ''ನನ್ನ ಜೀವನದಲ್ಲಿನ ಎಲ್ಲ ಪ್ರಗತಿಗೂ ಮೂಲಕಾರಣ ಸ್ವಾಮೀಜಿಯವರ ಆಶೀರ್ವಾದ ಹಾಗೂ ಅಯ್ಯನ್‌ಕಾಳಿಯ ಸಹಾಯ'' ಎನ್ನುತ್ತಿದ್ದಳು. ಮೀನಾಳ ವಿದ್ಯಾರ್ಥಿನಿ ದಾಕ್ಷಾಯಿಣಿ ವೇಲುತನ್ ಪ್ರಥಮ ಹರಿಜನ ಪದವೀಧರಳು ಹಾಗೂ ಸುಪ್ರಸಿದ್ಧ ಅಧ್ಯಾಪಕಿಯೂ ಆದಳು!

* * *

''ದೀನರು, ಪದದಲಿತರು, ಪಾಪಿಗಳು, ದುಃಖಿಗಳು, ಕ್ರಿಮಿಕೀಟದವರೆಗೆ ಎಲ್ಲರಿಗೂ ಸೇವೆ ಸಲ್ಲಿಸುವುದಕ್ಕೆ ಯಾರು ಸಿದ್ಧರಾಗಿರುವರೋ ಅವರ ಹೃದಯದಲ್ಲಿ ಗುರುದೇವನು ಆವಿರ್ಭವಿಸುವನು. ಅವರ ನಾಲಿಗೆಯ ಮೂಲಕ ಸಕಲ ಕಲಾಧಿದೇವಿ ಶಾರದೆ ಮಾತನಾಡುವಳು. ಜಗನ್ಮಯಿ ಮಹಾಶಕ್ತಿ ಅವರ ಹೃದಯದಲ್ಲಿ ನೆಲೆಸುವಳು.''

*(ಸ್ವಾಮಿ ವಿವೇಕಾನಂದರ ಕೃತಿಶ್ರೇಣಿ, ಸಂ.೪, ಪು. ೨೨೩)*

# ಏಕಾಗ್ರತೆಯ ಕಥೆಗಳು

ಸಂಗ್ರಹ: **ಡಾ. ಇ. ವಸಂತಕುಮಾರ್**



## 'ಹಕ್ಕಿಯ ತಲೆ ಮಾತ್ರ ಕಾಣುತ್ತದೆ'

ದ್ರೋಣಾಚಾರ್ಯರು ಕೌರವರು ಮತ್ತು ಪಾಂಡವರಿಗೆ ಧನುರ್ವಿದ್ಯಾಗುರುಗಳು. ಧನುರ್ವಿದ್ಯೆಯಲ್ಲಿ ಪರಿಣತರಾದ ತಮ್ಮ ಶಿಷ್ಯರನ್ನು ಗುರಿ ಹೊಡೆಯುವುದರಲ್ಲಿ ಪರೀಕ್ಷಿಸಲು ದ್ರೋಣಾಚಾರ್ಯರು, ಶಿಲ್ಪಿಯಿಂದ ಒಂದು ಕೃತಕವಾದ ಪಕ್ಷಿಯನ್ನು ಮಾಡಿಸಿ ಶಿಷ್ಯರಿಗೆ ತಿಳಿಯದಂತೆ ಅದನ್ನು ಒಂದು ಮರದ ಕೊಂಬೆಯ ತುದಿಗೆ ಕಟ್ಟಿಸಿದರು. ಎಲ್ಲರನ್ನೂ ಕರೆದು, ''ಬಾಲಕರೇ, ನೀವು ನಿಮ್ಮ ನಿಮ್ಮ ಬಿಲ್ಲುಬಾಣಗಳನ್ನು ತನ್ನಿ. ಈ ಮರಕ್ಕೆ ಎದುರಾಗಿ ನಿಂತುಕೊಳ್ಳಿ. ನಾನು ಹೇಳಿದಾಗ, ಅಗೋ ಆ ಹಕ್ಕಿಯ ತಲೆಗೆ ಹೊಡೆದು ಅದನ್ನು ಬೀಳಿಸಬೇಕು. ಒಬ್ಬೊಬ್ಬರಾಗಿ ನಿಮ್ಮನ್ನು ಕರೆಯುತ್ತೇನೆ'' ಎಂದು ಹೇಳಿದರು. ಮೊದಲು ಯುಧಿಷ್ಠಿರನನ್ನು ಕರೆದು, ''ಯುಧಿಷ್ಠಿರ! ಬಾಣವನ್ನು ಬಿಲ್ಲಿಗೆ ಹೂಡಿ ಸಿದ್ಧನಾಗು. ನಾನು ಹೇಳಿದಾಗ ಬಿಡು'' ಎಂದರು. ಒಂದು ಕ್ಷಣ ಬಿಟ್ಟು, ''ನಿನಗೆ ಮರದ ತುದಿಯಲ್ಲಿರುವ ಹಕ್ಕಿ ಕಾಣುತ್ತದೆಯೆ?'' ಎಂದು ದ್ರೋಣಾಚಾರ್ಯರು ಕೇಳಿದರು. ಯುಧಿಷ್ಠಿರನು ಹೌದೆಂದನು. ದ್ರೋಣರು ಇನ್ನೊಂದು ಕ್ಷಣ ಬಿಟ್ಟು, ''ಆ ಮರ, ನಾನು, ನಿನ್ನ ತಮ್ಮಂದಿರು, ಎಲ್ಲಾ ಕಾಣುತ್ತದೆಯೊ?'' ಎಂದು ಕೇಳಿದರು. ''ಹೌದು, ಎಲ್ಲವೂ ಎಲ್ಲರೂ ಕಾಣುತ್ತಿದ್ದಾರೆ'' ಎಂದ. ಮತ್ತೆ ಮತ್ತೆ ಇದೇ ಉತ್ತರ ಬಂದಿತು. ದ್ರೋಣರು ಅಸಂತುಷ್ಟರಾಗಿ, ''ನಿನ್ನಿಂದ ಈ ಲಕ್ಷ್ಯವನ್ನು ಭೇದಿಸುವುದು ಸಾಧ್ಯವಿಲ್ಲ'' ಎಂದು ಅವನನ್ನು ಕಳುಹಿಸಿ

ಬಿಟ್ಟರು. ನಂತರ ದುರ್ಯೋಧನ ಮುಂತಾದವರನ್ನೆಲ್ಲಾ ಒಬ್ಬೊಬ್ಬರನ್ನಾಗಿ ಕರೆದು ಕೇಳಿದರು. ಎಲ್ಲರೂ ಹಾಗೆಯೇ ಉತ್ತರ ಕೊಟ್ಟರು. ಅನಂತರ ಅರ್ಜುನನನ್ನು ಕರೆದು, ''ನೀನು ಇದನ್ನು ಹೊಡೆಯಬೇಕು. ಬಿಲ್ಲನ್ನು ಬಗ್ಗಿಸಿ ಸಿದ್ಧನಾಗು. 'ಬಿಡು' ಎಂದಾಗ ಬಾಣ ಬಿಡಬೇಕು'' ಎಂದರು. ಅರ್ಜುನ ಬಿಲ್ಲನ್ನು ಗುಂಡಾಗಿ ಬಗ್ಗಿಸಿ ಲಕ್ಷ್ಯವನ್ನು ನೋಡುತ್ತ ನಿಂತ. ಒಂದು ಕ್ಷಣ ಬಿಟ್ಟು ಮಿಕ್ಕವರನ್ನು ಕೇಳಿದಂತೆ ದ್ರೋಣರು, ''ಆ ಹಕ್ಕಿಯನ್ನೂ ಮರವನ್ನೂ ನನ್ನನ್ನೂ ನೋಡುತ್ತಿದ್ದೀಯೊ?'' ಎಂದು ಕೇಳಿದರು. ಅರ್ಜುನ, ''ಪಕ್ಷಿ ಮಾತ್ರ ಕಾಣುತ್ತದೆ, ಮರವಾಗಲೀ ನೀವಾಗಲೀ ಕಾಣುವುದಿಲ್ಲ'' ಎಂದು ಉತ್ತರವಿತ್ತನು. ದ್ರೋಣಾಚಾರ್ಯರಿಗೆ ಸಂತೋಷವಾಯಿತು. ಮತ್ತೊಂದು ಕ್ಷಣ ಬಿಟ್ಟು, ''ಹಕ್ಕಿ ಕಾಣುತ್ತದೆಯೊ? ಇನ್ನೊಂದು ಸಲ ಹೇಳು'' ಎಂದರು. ಅರ್ಜುನ, ''ಹಕ್ಕಿಯ ತಲೆ ಮಾತ್ರ ಕಾಣುತ್ತದೆ, ಅದರ ಮೈ ಕಾಣುವುದಿಲ್ಲ'' ಎಂದನು. ದ್ರೋಣಾಚಾರ್ಯರಿಗೆ ಅತ್ಯಂತ ಸಂತೋಷವಾಯಿತು. ರೋಮಾಂಚನಗೊಂಡು ''ಬಿಡು, ಬಾಣವನ್ನು'' ಎಂದರು. ಅರ್ಜುನ ಬಾಣ ಬಿಟ್ಟನು. ಹರಿತವಾದ ಬಾಣ ಥಟ್ಟನೆ ಹಕ್ಕಿಯ ತಲೆಯನ್ನು ಕತ್ತರಿಸಿ ಕೆಡವಿತು. ಜಯಶೀಲನಾದ ಅರ್ಜುನನನ್ನು ದ್ರೋಣಾಚಾರ್ಯರು ಆಲಂಗಿಸಿಕೊಂಡರು.

## ಧ್ಯಾನದ ಆಟ

ಬಾಲಕ ನರೇಂದ್ರ, (ನಂತರ ಸ್ವಾಮಿ ವಿವೇಕಾನಂದರು) ತನ್ನ ಸಂಗಡಿಗರೊಂದಿಗೆ ಆಡುತ್ತಿದ್ದ ಆಟಗಳಲ್ಲೊಂದು, ಧ್ಯಾನ ಮಾಡುವುದು. ಒಮ್ಮೆ ಓರಗೆಯ ಹುಡುಗರೊಂದಿಗೆ ಧ್ಯಾನ ಮಾಡಲು ಕುಳಿತ. ಸ್ವಲ್ಪ ಹೊತ್ತಿಗೆ ಒಂದು ಹಾವು ಅಲ್ಲಿ ಕಂಡಿತು. ಭಯದಿಂದ ಹುಡುಗರೆಲ್ಲಾ ಎದ್ದು ಓಡಿದರು. ಆದರೆ ನರೇಂದ್ರನು ಇದರ ಪರಿವೆಯಿಲ್ಲದೆ ಧ್ಯಾನಮಗ್ನನಾಗಿದ್ದನು. ಹುಡುಗರು ಎಷ್ಟು ಕಿರಿಚಿದರೂ ಅವನು ಕದಲಲಿಲ್ಲ. ಆ ಹುಡುಗರ ಪೈಕಿ ಧೈರ್ಯಶಾಲಿಯಾದವನೊಬ್ಬ ನರೇಂದ್ರನ ಹತ್ತಿರ ಬಂದು ಹಾವು ಬರುತ್ತಿದೆ, ಬೇಗ ಎದ್ದು ಓಡು ಎಂದು ಹೇಳಿ ಕೂಡಲೆ ಅಲ್ಲಿಂದ ಕಾಲು ಕಿತ್ತನು. ನರೇಂದ್ರನಿಗೆ ಇದಾವುದೂ ತಿಳಿಯಲಿಲ್ಲ, ಹಾವು ನರೇಂದ್ರನ ಬಳಿ ಬಂದರೂ ಏನೂ ತೊಂದರೆ ಮಾಡದೆ ಹೊರಟುಹೋಯಿತು. ಸ್ವಲ್ಪ ಸಮಯದ ನಂತರ ನರೇಂದ್ರ ಧ್ಯಾನದಿಂದ ಎಚ್ಚೆತ್ತನು. ಆಗ ಹುಡುಗರು, ''ಹಾವು ಬಂದರೂ ಹೆಡೆಯೆತ್ತಿದರೂ, ನಾವೆಲ್ಲಾ ಅಷ್ಟು ಕಿರಿಚಿದರೂ ನೀನು ಓಡಿಹೋಗದೆ ಸುಮ್ಮನಿದ್ದೆಯಲ್ಲಾ, ಅದೇಕೆ?'' ಎಂದು ನರೇಂದ್ರನನ್ನು ಪ್ರಶ್ನಿಸಿದರು. ಆಗ ಅವನು, ''ನನಗೆ ಅದಾವುದೂ ತಿಳಿಯಲಿಲ್ಲ, ನಾನೊಂದು ಅವರ್ಣನೀಯ ಆನಂದವನ್ನು ಅನುಭವಿಸುತ್ತಿದ್ದೆ'' ಎಂದು ಹೇಳಿದನು. ಆಗ



ಸ್ವಾಮೀಜಿಯವರ ಮನಸ್ಸು ಸಂಪೂರ್ಣ ಧ್ಯಾನದಲ್ಲಿ ಏಕಾಗ್ರಗೊಂಡಿತ್ತು .

## ಬೆಸ್ತ ಮತ್ತು ಏಕಾಗ್ರತೆ

ಒಬ್ಬ ಒಂಟಿಯಾಗಿ, ಒಂದು ಕೆರೆಯ ದಡದಲ್ಲಿ ಕುಳಿತು ಮೀನು ಹಿಡಿಯುತ್ತಿದ್ದ. ಗಾಳವನ್ನು ಬೀಸಿದ ಎಷ್ಟೋ ಹೊತ್ತಿನ ಮೇಲೆ ಗಾಳದ ಬೆಂಡು ಅಲುಗಲಾರಂಭಿಸಿತು. ಬೆಂಡು ಒಮ್ಮೊಮ್ಮೆ ನೀರಿನೊಳಕ್ಕೆ ಸ್ವಲ್ಪ ಸ್ವಲ್ಪ ಮುಳುಗುತ್ತಿತ್ತು. ಮೀನು ಹಿಡಿಯುವವನು ಅದನ್ನು ಗಮನಿಸಿ ಗಾಳದ ಕಡ್ಡಿಯನ್ನು ಮೇಲೆತ್ತಲು ಸಿದ್ಧನಾಗುತ್ತಿದ್ದ. ಆ ಸಮಯಕ್ಕೆ ಒಬ್ಬ ದಾರಿಹೋಕ ಅವನ ಹತ್ತಿರ ಬಂದು, ''ಬ್ಯಾನರ್ಜಿ ಅವರ ಮನೆ ಎಲ್ಲಿದೆ ಗೊತ್ತಿದೆಯೆ?'' ಎಂದು ಕೇಳಿದ. ಮೀನಿನವನು ಗಾಳದ ಕಡ್ಡಿಯನ್ನು ಮೇಲೆ ಎತ್ತುವುದರಲ್ಲಿ ಮಗ್ನನಾಗಿದ್ದ. ಈತನಿಗೆ ಯಾವ ಉತ್ತರವನ್ನೂ ಕೊಡಲಿಲ್ಲ. ದಾರಿಹೋಕ ಮತ್ತೆ ಮತ್ತೆ ದನಿ ಏರಿಸಿ, ''ಅವರ ಮನೆ ಎಲ್ಲಿದೆ ಎಂಬುದು ನಿನಗೆ ಗೊತ್ತಿದೆಯೆ?'' ಎಂದು ಕೇಳಿದ. ಮೀನು ಹಿಡಿಯುವವನಿಗೆ ಮತ್ತಾವುದರ ಮೇಲೂ ಪ್ರಜ್ಞೆ ಇಲ್ಲ. ಅವನ ಕೈ ಸುಮ್ಮನೆ ನಲುಗುತ್ತಿತ್ತು. ಅವನ ದೃಷ್ಟಿಯೆಲ್ಲಾ ಬೆಂಡಿನ ಕಡೆಗೇ ಇತ್ತು. ಇದನ್ನು ನೋಡಿ ದಾರಿಹೋಕ ಬೇಸರಗೊಂಡು ಅಲ್ಲಿಂದ ಹೊರಟುಹೋದ. ಆತ ಸಾಕಷ್ಟು ದೂರ ಹೋದ ಮೇಲೆ, ಬೆಂಡು ಸಂಪೂರ್ಣವಾಗಿ ನೀರಿನಲ್ಲಿ ಮುಳುಗಿತು. ಮೀನು



ಹಿಡಿಯುತ್ತಿದ್ದವ ತಕ್ಷಣ ಗಾಳದ ಕಡ್ಡಿಯನ್ನು ಮೇಲಕ್ಕೆ ಎತ್ತಿ ಮೀನನ್ನು ದಡಕ್ಕೆ ಹಾಕಿದ. ಬಳಿಕ ಮುಖದ ಬೆವರನ್ನು ಒರೆಸಿಕೊಂಡು ಅವನು ಆ ದಾರಿಹೋಕನನ್ನು ಕೂಗಲಾರಂಭಿಸಿದ, ''ಯಾರ್ರೀ, ಏನ್ರೀ, ಯಾರು ಅಲ್ಲಿ ಹೋಗುತ್ತಾ ಇರುವುದು? ಬನ್ರೀ. ಇಲ್ಲಿ ಸ್ವಲ್ಪ ಬಂದು ಹೋಗ್ರೀ'' ಅಂತ. ದಾರಿಹೋಕನಿಗೆ ಹಿಂದಿರುಗಿ ಬರಲು ಇಚ್ಛೆ ಇಲ್ಲ. ಮೀನು ಹಿಡಿಯುವವ ಬಹಳವಾಗಿ ಕೂಗಿ ಕರೆದ ನಂತರ ಆತ ಹಿಂದಿರುಗಿ ಬಂದು ಕೇಳಿದ, ''ಏಕೆ ಸುಮ್ಮನೆ ಗಂಟಲು ಹರಿಯುವ ಹಾಗೆ ಕಿರಿಚುತ್ತಿದ್ದೀಯೆ?'' ಅಂತ. ಆಗ ಮೀನು ಹಿಡಿಯುವವ ಕೇಳಿದ, ''ನನ್ನನ್ನು ಏನು ಕೇಳುತ್ತಿದ್ದಿರಿ?'' ಅಂತ. ದಾರಿಹೋಕ ಹೇಳಿದ, ''ಆಗ ನಿನ್ನನ್ನು ಎಷ್ಟೊಂದು ಸಲ ಕೇಳಿದೆ. ಈಗ ನೀನು ನನಗೇನು ಬೇಕು ಅಂತ ಕೇಳುತ್ತಾ ಇದ್ದೀಯಲ್ಲ!'' ಬಳಿಕ ಮೀನು ಹಿಡಿಯುವವ ಹೇಳಿದ, ''ಆಗ ನನ್ನ ಗಾಳದ ಬೆಂಡು ಇನ್ನೇನು ಮುಳುಗುವುದರಲ್ಲಿತ್ತು. ಆದ ಕಾರಣ ನೀವು ಕೇಳಿದ ಪ್ರಶ್ನೆಯ ಒಂದು ಪದವೂ ನನ್ನ ಕಿವಿಗೆ ಬೀಳಲಿಲ್ಲ'' ಎಂದು.

ನಿಜವಾದ ಏಕಾಗ್ರತೆಯೆಂದರೆ ಇದು. ತನ್ನ ಸುತ್ತಮುತ್ತ ಏನು ನಡೆಯುತ್ತಿದ್ದರೂ ಅದಾವುದರ ಕಡೆಗೂ ಅವನ ಗಮನ ಇರದು.

## ಸಹಸ್ರದ್ವೀಪೋದ್ಯಾನದಲ್ಲಿ ಸ್ವಾಮೀಜಿ

**ನ್ಯೂ**ಯಾರ್ಕ್ ಸಮೀಪದ ಸಹಸ್ರದ್ವೀಪೋದ್ಯಾನದಲ್ಲಿ ಸ್ವಾಮೀಜಿ ಕಳೆದ ಕೊನೆಯ ದಿನದ ಘಟನೆ ಅದ್ಭುತವೂ ಪ್ರಶಸ್ತವೂ ಆಗಿದೆ. ಮಧ್ಯಾಹ್ನದ ಊಟವಾದ ನಂತರ ಸ್ವಾಮೀಜಿ ಎಂದಿನಂತೆ ಅಡ್ಡಾಡಲು ಹೊರಟರು. ಕೊನೆಯ ದಿನವಾದ ಇಂದು ಸ್ವಾಮೀಜಿ ತಮ್ಮ ಶಿಷ್ಯೆಯರಾದ ಕ್ರಿಸ್ಟೈನ್ ಮತ್ತು ಫುಂಕೆಯವರನ್ನು ತಮ್ಮ ಜತೆಗೆ ಸುತ್ತಾಡಲು ಕರೆದರು. ಮೂವರೂ ಒಂದು ಗುಡ್ಡದ ಮೇಲಕ್ಕೆ ಸುಮಾರು ಅರ್ಧ ಮೈಲಿ ಹತ್ತುತ್ತಾ ನಡೆದರು. ಪ್ರದೇಶವೆಲ್ಲಾ ಮರಗಳಿಂದ ಕೂಡಿ ನಿರ್ಜನವಾಗಿತ್ತು. ಕೊನೆಗೆ, ಕೊಂಬೆಗಳು ಬಹಳ ಕೆಳಗೆ ಇಳಿಬಿದ್ದಿದ್ದ ಓಕ್ ಮರವೊಂದನ್ನು ಸ್ವಾಮೀಜಿ ಆರಿಸಿದರು. ಕೆಳಗೆ ಹರಡಿದ್ದ ರೆಂಬೆಗಳ ಕೆಳಗೆ ಎಲ್ಲರೂ ಕುಳಿತರು. ಸ್ವಾಮೀಜಿ ತಮ್ಮೊಂದಿಗೆ ಮಾತನಾಡುತ್ತಾರೆ ಎಂದು ಅವರಿಬ್ಬರೂ ನಿರೀಕ್ಷಿಸುತ್ತಿದ್ದರು. ಇದ್ದಕ್ಕಿದ್ದಂತೆ ಸ್ವಾಮೀಜಿ, ''ನಾವು ಈಗ ಧ್ಯಾನ ಮಾಡೋಣ! ಬೋಧಿವೃಕ್ಷದ ಅಡಿಯಲ್ಲಿ ಕುಳಿತ ಬುದ್ಧನಂತಾಗೋಣ!'' ಎಂದರು. ಸ್ವಾಮೀಜಿ ಕಂಚಿನ ಪ್ರತಿಮೆಯಂತೆ ನಿಶ್ಚಲರಾದರು. ಸ್ವಲ್ಪ ಹೊತ್ತಿಗೆ ಗುಡುಗು, ಮಿಂಚು ಪ್ರಾರಂಭವಾಯಿತು. ಮಳೆ ಸುರಿಯಿತು. ಸ್ವಾಮೀಜಿಯವರ ಗಮನಕ್ಕೆ ಇದಾವುದೂ ಬರಲೇ ಇಲ್ಲ! ಫುಂಕೆಯವರು ತಮ್ಮ ಕೊಡೆಯನ್ನು ಸ್ವಾಮೀಜಿಯವರ ಮೇಲೆ ಹಿಡಿದು ಮಳೆಯಿಂದ ಅವರನ್ನು ರಕ್ಷಿಸಲು ಸಾಧ್ಯವಾದಷ್ಟೂ ಪ್ರಯತ್ನಿಸಿದರು. ಧ್ಯಾನ ಮಗ್ನರಾಗಿದ್ದ ಸ್ವಾಮೀಜಿಗೆ ಇದಾವುದರ ಪರಿವೆಯೂ ಇರಲಿಲ್ಲ! ದೂರದಲ್ಲಿ ಕೂಗುಗಳು ಕೇಳಿಬಂದವು. ಉಳಿದವರು ಅವರನ್ನು ಹುಡುಕಿಕೊಂಡು ಕೊಡೆ ಮತ್ತು ಮಳೆ-ಅಂಗಿಗಳೊಂದಿಗೆ ಬಂದರು. ಸ್ವಾಮೀಜಿ ವಿಷಾದದ ನೋಟದಿಂದ ಸುತ್ತಲೂ ನೋಡಿದರು, ಏಕೆಂದರೆ ಅವರು ಹೋಗಲೇಬೇಕಾಗಿತ್ತು. ಅವರೆಂದರು, ''ನಾನೇನು, ಮತ್ತೊಮ್ಮೆ ಮಳೆಗಾಲದ ಕಲ್ಕತ್ತೆಯಲ್ಲಿರುವೆನೆ?''



# ಶ್ರೀಮಾತೆಯವರ ಪತ್ರಗಳು - ೧೯

ಅನುವಾದ: ಪ್ರವ್ರಾಜಿಕಾ ಧರ್ಮಪ್ರಾಣಾ

### ಪತ್ರ - ೧೦೮

ಶ್ರೀ ಶ್ರೀ ದುರ್ಗಾ

೧೮ ಡಿಸೆಂಬರ್, ೧೯೧೩
UDBODHAN OFFICE
12, 13 Gopal Chandra Neogi Lane
Bagbazar P.O., CALCUTTA
ಪೌಷ ೩, ಗುರುವಾರ

ಶುಭವಾಗಲಿ.

ಮಗೂ, ನಿನ್ನ ಪತ್ರವು ಸಿಕ್ಕಿದೆ. ನಿನ್ನ ಮಾನಸಿಕ ಅವಸ್ಥೆ ಕೆಟ್ಟಿದೆ. ಮನಸ್ಸು ಮದ ಏರಿದ ಆನೆಯಂತೆ. ವಿಚಾರ ಮಾಡಿ ಮನಸ್ಸನ್ನು ಹಿಂದೆಳೆಯಬೇಕು, ಠಾಕೂರರನ್ನು ಪ್ರಾರ್ಥಿಸಬೇಕು. ಮನಸ್ಸಿನ (ಈ ರೀತಿಯ) ಅವಸ್ಥೆ ಸಾಧಾರಣವಾಗಿ ಎಲ್ಲರಿಗೂ ಬರುವುದು. ಇಲ್ಲಿ ಎಲ್ಲವೂ ಕ್ಷೇಮ. ನನ್ನ ಆರೋಗ್ಯ ಅಷ್ಟೇನೂ ಚೆನ್ನಾಗಿಲ್ಲ, ಅಷ್ಟಾಗಿ ಕೆಟ್ಟೂ ಇಲ್ಲ.. ಒಂದು ರೀತಿ ಇದ್ದೇನೆ. ರಾಧು ಈಗ ಸದ್ಯ ಚೆನ್ನಾಗಿದ್ದಾಳೆ. ಮತ್ತೆ ಎಲ್ಲರೂ ಕ್ಷೇಮ. ಇನ್ನು ಹೆಚ್ಚೇನು ಬರೆಯಲಿ? ನಿಮಗೆಲ್ಲರಿಗೂ ನನ್ನ ಆಶೀರ್ವಾದಗಳು ಹಾಗೂ ಮಕ್ಕಳಿಗೆಲ್ಲ ನನ್ನ ಆಶೀರ್ವಾದವನ್ನು ತಿಳಿಸು. ಇತಿ,

ನಿನ್ನ ಶ್ರೀಮಾತೆ

***ಪತ್ರ ಪಡೆದವರು***

*ನಿಶಿಕಾಂತ ಮಜುಮ್‌ದಾರ್*

### ಪತ್ರ - ೧೦೯

ಶ್ರೀ ಶ್ರೀ ದುರ್ಗಾಮಾತಾ

೩೧.೧೨.೧೯೧೩
ಪೌಷ ೬, ರವಿವಾರ

ಶುಭವಾಗಲಿ.

ತಾಯಿ ಸರಯೂ,

ಈಗ ತಾನೇ ಪತ್ರ ಸಿಕ್ಕಿ ಆನಂದವಾಯಿತು. ನಿನ್ನೆ ನನ್ನ ಜನ್ಮದಿನಕ್ಕೆ ಶರತ್ ಔತಣ ಕೊಡಿಸಿದ್ದ. ಮತ್ತೆ ಇಲ್ಲಿ ಎಲ್ಲರೂ ಚೆನ್ನಾಗಿದ್ದಾರೆ. ಅಲ್ಲಿಯೂ (ಎಲ್ಲರೂ) ಚೆನ್ನಾಗಿದ್ದಾರೆಂದು ಕೇಳಿ ಸಮಾಧಾನವಾಯಿತು. ಇನ್ನೇನು ಬರೆಯಲಿ? ನಿಮಗೆಲ್ಲಾ ನನ್ನ ಆಶೀರ್ವಾದಗಳು.

ಇತಿ ನಿನ್ನ ಮಾತೃದೇವಿ

***ಪತ್ರ ಪಡೆದವರ ಹೆಸರು ಮತ್ತು ವಿಳಾಸ***

*Sriman Taraknath Roy Chowdhury*
*Sub Registrar*
*Manahardi , (Dacca)*

(ಸೂಚನೆ: ಪತ್ರ - ೧೧೦ ಹಿಂದಿನ ಸಂಚಿಕೆಯಲ್ಲಿ ಪ್ರಕಟವಾಗಿದೆ.)

### ಪತ್ರ - ೧೧೧

The Udbodhan Office
12, 13 Gopal Chanra Neogi's Lane
Baghbaz ar , Calcatta
Dated ಫಾಲ್ಗುಣ ೨೪, ೧೯೧೪
೯.೩.೧೯೧೪

ಶುಭವಾಗಲಿ.

ನಿನ್ನ ಪತ್ರದಲ್ಲಿ ನಿಮ್ಮೆಲ್ಲರ ಕುಶಲ ವಾರ್ತೆ ಅರಿತು ಸಮಾಧಾನವಾಯಿತು. ನಾವೆಲ್ಲರೂ ಚೆನ್ನಾಗಿದ್ದೇವೆ, ನಿಮಗೆಲ್ಲರಿಗೂ ನನ್ನ ಆಶೀರ್ವಾದಗಳು.

ಇತಿ ಆಶೀರ್ವಾದ ನೀಡುತ್ತಿರುವ
ನಿನ್ನ ಮಾತೃದೇವಿ

***ಪತ್ರ ಪಡೆದವರ ಹೆಸರು ಮತ್ತು ವಿಳಾಸ ಸಿಕ್ಕಿಲ್ಲ***

### ಪತ್ರ - ೧೧೨

೧೮.೪.೧೯೧೪
ವೈಶಾಖ ೫ , ಕಲ್ಕತ್ತಾ

ಶುಭವಾಗಲಿ,

ಮಗೂ, ನಿನ್ನ ಪತ್ರವು ಸಿಕ್ಕಿ ಸಮಾಧಾನವಾಯಿತು. ನಿನಗೆ ನನ್ನ ಆಶೀರ್ವಾದ. ಯಾರೆಲ್ಲಾ ಭಕ್ತರು ಜನರಿಗೆ ಸಹಾಯ ಮಾಡುತ್ತಿರುವರೋ ಅವರಿಗೆಲ್ಲ ನನ್ನ ಆಶೀರ್ವಾದವನ್ನು ತಿಳಿಸು. ಈ ಕೆಲಸಕ್ಕೆ ಸಮಾನ ಇನ್ನೇನಿದೆ? ಶ್ರೀ ಠಾಕೂರರು ನಿಮಗೆಲ್ಲ ಮಂಗಳವನ್ನುಂಟುಮಾಡಲಿ. ನಾನು ಒಂದು ರೀತಿ ಚೆನ್ನಾಗಿದ್ದೇನೆ. ನಿಮ್ಮೆಲ್ಲರ ಕ್ಷೇಮಕ್ಕಾಗಿ ಪ್ರಾರ್ಥನೆ ಮಾಡುತ್ತಿದ್ದೇನೆ.

ಆಶೀರ್ವಾದ ಮಾಡುತ್ತಿರುವ,

ನಿಮ್ಮೆಲ್ಲರ ಶ್ರೀಮಾತೆ

*ಪತ್ರ ಪಡೆದವರ ಹೆಸರು ಮತ್ತು ವಿಳಾಸ*
*ಶ್ರೀಮಾನ್ ಸುರೇಂದ್ರನಾಥ ಗುಪ್ತ*
*ಪೋ: ಶ್ರೀಹಟ್ಟ – ಮಿರಾಬಜಾರ್*
*ಜಿಲ್ಲೆ: ಶ್ರೀಹಟ್ಟ*

**ಪತ್ರ - ೧೧೩**

೧೮.೪.೧೯೧೪
ಉದ್ಬೋಧನ ಕಾರ್ಯಾಲಯ
೧೨, ೧೩ ನಂ. ಗೋಪಾಲಚಂದ್ರ ನಿಯೋಗಿ ಲೇನ್
ಬಾಗ್‌ಬಜಾರ್ ಪೋ: ಕಲ್ಕತ್ತಾ
ವೈಶಾಖ ೫

ಶುಭವಾಗಲಿ,

ಮಗೂ, ನಿನ್ನ ಪತ್ರವು ಸಿಕ್ಕಿ ಸಂತೋಷವಾಯಿತು. ನೀನು ಚೆನ್ನಾಗಿರುವೆ ಎಂದು ಕೇಳಿ ಸಮಾಧಾನವಾಯಿತು. ಅವರ ಪಾದ ಪದ್ಮದಲ್ಲಿ ನಿನ್ನ ಮನಸ್ಸು ನೆಲೆಸಿರಲಿ ಮತ್ತು ನೀನು ಚೆನ್ನಾಗಿರು— ಇದನ್ನೇ ಆಶೀರ್ವಾದ ಮಾಡುತ್ತಿದ್ದೇನೆ. ಇದರ ಜೊತೆಯಲ್ಲಿ ನಿರ್ಮಾಲ್ಯ ಇಟ್ಟಿದ್ದೇನೆ. ತಲೆಯಲ್ಲಿ ಧರಿಸು. ಶ್ರೀ ಠಾಕೂರರ ಬಳಿ ಪ್ರಾರ್ಥಿಸುತ್ತಿದ್ದೇನೆ, ನಿನಗೆ ಮಂಗಳವಾಗಲಿ, ಭಕ್ತಿಯುಂಟಾಗಲಿ, ದೀರ್ಘಾಯುವಾಗು ಎಂದು. ಬದ್ರಿ ಷಾನಿಗೆ ನನ್ನ ಆಶೀರ್ವಾದ ಕೊಡು. ಮತ್ತು ಫ್ರಾಂಕ್‌ಗೆ ನನ್ನ ಆಶೀರ್ವಾದ ತಿಳಿಸು.

ಆಶೀರ್ವಾದ ನೀಡುತ್ತಿರುವ
ನಿನ್ನ ತಾಯಿ

*ಪತ್ರ ಪಡೆದವರ ಹೆಸರು ಮತ್ತು ವಿಳಾಸ*
*Swami Shivanandaji Maharaj*
*chilkapita House , Almora*

Note : ಲಾಲಾ ಬದ್ರಿ ಷಾ ಆಲ್ಮೋರದಲ್ಲಿ ವಾಸಿಸುತ್ತಿದ್ದ ಒಬ್ಬ ವ್ಯಾಪಾರಿ. ಮೇರಿ ಸಿ ಫಾಂಕಿ ಅಮೇರಿಕಾದ ಡೆಟ್ರೋಯೇಟ್‌ನಲ್ಲಿ ವಾಸಿಸುತ್ತಿದ್ದ ಒಬ್ಬ ಭಕ್ತೆ.

**ಪತ್ರ - ೧೧೪**

ಶ್ರೀ ಶ್ರೀ ಹರಿ

೨.೧೦.೧೯೧೪
ಆಶ್ವಯುಜ ೧೦, ಶುಕ್ರವಾರ

ಪರಮ ಆಶೀರ್ವಾದಗಳು.

ತಾಯಿ, ನಿನ್ನ ಪತ್ರ ಸಿಕ್ಕಿ ಆನಂದವಾಯಿತು. ರಾಧು ಮೊದಲಾದವರು ಚೆನ್ನಾಗಿದ್ದಾರೆ. ನೀವೆಲ್ಲ ಚೆನ್ನಾಗಿರುವಿರೆಂದು ಕೇಳಿ ಸಮಾಧಾನವಾಯಿತು. ನಿಮಗೆಲ್ಲಾ ನನ್ನ ಆಶೀರ್ವಾದ. ಇನ್ನು ಹೆಚ್ಚೇನು ಬರೆಯಲಿ?

ಇತಿ
ನಿಮ್ಮೆಲ್ಲರ ತಾಯಿ

*ಪತ್ರ ಪಡೆದವರ ಹೆಸರು ಮತ್ತು ವಿಳಾಸ*
*ಶ್ರೀಮತಿ ಸರಯೂ ಬಾಲಾ ದೇವಿ*
*C/121 , Hinu*
*Ranchi Secretariate*

**ಪತ್ರ - ೧೧೫**

ಶ್ರೀ ಶ್ರೀ ಕಾಳಿಮಾತೆ

೨.೧೦.೧೯೧೪

ಚಿರಂಜೀವಿಯಾಗು.

ಸುರೇಂದ್ರ,

ನಿನ್ನ ವಿಜಯ ಪ್ರಣಾಮ ಸ್ವೀಕರಿಸಿದೆ. ಮತ್ತೆ ರಾಧುವಿನ ಕಾಯಿಲೆ ವಾಸಿಯಾಗಿಲ್ಲ. ನಾನು ಚೆನ್ನಾಗಿದ್ದೇನೆ ಮತ್ತು ನಿನಗೆ ನನ್ನ ಆಶೀರ್ವಾದ. ಇಲ್ಲಿ ಎಲ್ಲರೂ ಚೆನ್ನಾಗಿದ್ದಾರೆ.

ಇತಿ
ಶ್ರೀ ಶ್ರೀ ಮಾತೆ

*ಪತ್ರ ಪಡೆದವರ ಹೆಸರು ಮತ್ತು ವಿಳಾಸ*
*ಶುಭಪ್ರದರಾದ*
*ಶ್ರೀಮಾನ್ ಸುರೇಂದ್ರನಾಥ ಗುಪ್ತ*
*ಪೋ : ಆ: ಕರೀಂಗಂಜ್*
*Govt. Agri. Farm, Sylhet*

**ಪತ್ರ - ೧೧೬**

೧.೧೧.೧೯೧೪
Udbodhan Office
12, 13 Gopal chandra Neogi's Lane
ಕಾರ್ತಿಕ ೧೫

ಶುಭವಾಗಲಿ,

ಮಗೂ, ನಿನ್ನ ಪತ್ರವು ಸಿಕ್ಕಿದೆ. ಸೊಸೆಯಮ್ಮನಿಗೆ ಕಾಯಿಲೆಯಾಗಿದೆ ಎಂದು ಕೇಳಿ ದುಃಖವಾಯಿತು. ಶ್ರೀ ಠಾಕೂರರಿಗೆ ಪ್ರಾರ್ಥನೆ ಮಾಡುತ್ತಿದ್ದೇನೆ. ಶಸ್ತ್ರಕ್ರಿಯೆ ಮಾಡುವುದು, ಮಾಡದೆ ಇರುವುದು ಇದರ ಬಗ್ಗೆ ಡಾಕ್ಟರರ ಸಲಹೆಯಂತೆ ನಡೆಯಬೇಕು. ನನಗೆ ಈ ವಿಷಯದ ಬಗ್ಗೆ ಹೆಚ್ಚೇನೂ ಹೇಳಲು ಸಾಧ್ಯವಿಲ್ಲ.

ನಿನಗೆ ನನ್ನ ಆಶೀರ್ವಾದ ಹಾಗೂ ಸೊಸೆಯಮ್ಮನಿಗೂ ಮತ್ತು ಮಕ್ಕಳಿಗೂ ತಿಳಿಸು. ಇಲ್ಲಿ ಎಲ್ಲವೂ ಕ್ಷೇಮ.

ಇತಿ ಆಶೀರ್ವಾದ ನೀಡುತ್ತಿರುವ
ನಿನ್ನ ಮಾತೆ

*ಪತ್ರ ಪಡೆದವರ ಹೆಸರು ಮತ್ತು ವಿಳಾಸ*
*Sj Taraknath Roy Chowdhury*
*Sub-Registrar*
*Monohardi P.O., Dacca*



# ಸ್ವಾಮಿ ತ್ಯಾಗೀಶಾನಂದರ
# ‘Srimad Bhagavad Gita : Insights and Significance’

ಭಗವದ್ಗೀತೆ ಜನಜನಿತವಾದ ಕೃತಿ. ಅದು ದೇಶ, ಕಾಲ, ವಯಸ್ಸು, ಧರ್ಮ, ಮತ – ಭೇದಗಳಿಲ್ಲದೆ ಎಲ್ಲರಿಗೂ ಅವರವರ ನೆಲೆಯಲ್ಲಿ ಉಪಯೋಗಕ್ಕೆ ಬರುವಂತಹ ಕೃತಿ. ಆಧ್ಯಾತ್ಮಿಕ ಜ್ಞಾನ ಪಿಪಾಸುಗಳು ಯಾವ ಸ್ತರದವರೇ ಆಗಿರಲಿ, ಎಲ್ಲರಿಗೂ ತನ್ನ ಸಹಾಯಹಸ್ತ ಚಾಚುವ ಮೇರು ಕೃತಿ. ಹಾಗಾಗಿ ಈ ಕೃತಿಯನ್ನು ಕುರಿತು ತಮ್ಮ ತಮ್ಮ ವಿಚಾರ ವಿಮರ್ಶೆಗಳನ್ನು ಅನೇಕರು ಬರೆದಿರುವುದರಿಂದ, ಇದರ ಮೇಲಿನ ಭಾಷ್ಯ ವ್ಯಾಖ್ಯಾನ ಮುಂತಾದ ಕೃತಿಗಳು ಲಕ್ಷಾಧಿಕ ಎಂದರೆ ಅತಿಶಯೋಕ್ತಿಯಲ್ಲವೇನೊ! ಹಾಗಿರುವಾಗ ಗೀತೆಯ ಮೇಲೆ ಇನ್ನೊಂದು ವ್ಯಾಖ್ಯೆಯ ಆವಶ್ಯಕತೆ ಏನಿದೆ — ಎಂಬ ಪ್ರಶ್ನೆ ಏಳುವುದೂ ಸಹಜವೇ! ಆದರೆ ‘Srimad Bhagavad Gita-Insights and Significance’ ಕೃತಿಯ ಪೀಠಿಕಾಭಾಗ ಒಂದಷ್ಟೇ ಸಾಕು, ಇದು ಮೇಲೆ ಹೇಳಿದ ಲೆಕ್ಕವಿಲ್ಲದಷ್ಟು ಗ್ರಂಥಗಳನ್ನು ಮೀರಿ, ವಿಭಿನ್ನವೂ ವಿಶಿಷ್ಟವೂಆಗಿ ಹೇಗೆ ನಿಲ್ಲಬಲ್ಲದು ಎಂದು ಅರಿಯಲು. ೧) ಗೀತೆಯ ಸ್ವರೂಪ, ಸ್ವಭಾವ, ಅಗತ್ಯತೆ, ಉಪದೇಶದ ಹಿನ್ನೆಲೆ... ಇತ್ಯಾದಿ ಅಂಶಗಳನ್ನು ಕುರಿತು ತಾತ್ತ್ವಿಕ ನೆಲೆಗಟ್ಟಿನಲ್ಲಿ, ತಮ್ಮ ವಿಮರ್ಶಾತ್ಮಕ ಮೇಧೆಯ ಒರಗಲ್ಲಿಗೆ ಹಚ್ಚಿ ಸುದೀರ್ಘವಾದ ಸಂಶೋಧನಾತ್ಮಕ ತೌಲನಿಕ ಪೀಠಿಕೆಯನ್ನು ಸ್ವಾಮಿ ತ್ಯಾಗೀಶಾನಂದಜೀ ಅವರು ನೀಡಿದ್ದಾರೆ. ವೇದದ ಅತ್ಯುತ್ತಮ ಭಾಷ್ಯ ಗೀತೆ ಎಂದು ಪ್ರತಿಪಾದಿಸುವ ಸ್ವಾಮೀಜಿ, ಅದನ್ನು ಅನೇಕ ದೃಷ್ಟಾಂತಗಳಿಂದ ದೃಢಪಡಿಸುತ್ತಾರೆ. ಇಲ್ಲಿ ಅರ್ಜುನ ‘ಧರ್ಮ’ವನ್ನು ಪರಿಭಾವಿಸುತ್ತಿದ್ದ ರೀತಿಯನ್ನು ಗಮನಿಸಿ, ಆ ಭಾವದಿಂದ ಅವನ ಚಿಂತೆಯನ್ನು ಉನ್ನತೀಕರಿಸಲು ಕೃಷ್ಣನು ಯತ್ನಿಸಿದ ಕ್ರಮವನ್ನು ಸ್ವಾಮೀಜಿ ಗುರುತಿಸುತ್ತಾರೆ. ೨) ಸ್ಯಾನ್‌ಫ್ರಾನ್ಸಿಸ್ಕೋ ವೇದಾಂತ ಸೊಸೈಟಿಯ ಅಧ್ಯಕ್ಷರಾದ ಸ್ವಾಮಿ ತತ್ತ್ವಮಯಾನಂದಜಿ ಮಹಾರಾಜ್‌ರವರು ಈ ಗ್ರಂಥಕ್ಕೆ ಬರೆದಿರುವ ತಮ್ಮ ಮುನ್ನುಡಿಯಲ್ಲಿ ಇಲ್ಲಿಯವರೆಗೆ ಪ್ರಕಟಗೊಂಡಿರುವ ಇತರ ಎಲ್ಲಾ ಗ್ರಂಥಗಳಿಗಿಂತ ಇದು ಹೇಗೆ ವಿಶಿಷ್ಟವಾಗಿದೆ ಎಂಬುದನ್ನು ಸ್ಪಷ್ಟಪಡಿಸಿದ್ದಾರೆ. ೩) ಪ್ರತಿಯೊಂದು ಅಧ್ಯಾಯವನ್ನೂ, ಆ ಅಧ್ಯಾಯದ ಸಾರಭೂತ ಶಾಸ್ತ್ರಮಥಿತ ಅಂಶವನ್ನೂ ತಿಳಿಸುವ ಚಿಕ್ಕದಾದ, ಆದರೆ ತರ್ಕಬದ್ಧವಾದ ವಿದ್ವತ್ಪೂರ್ಣ ‘ಉಪಕ್ರಮ’ದೊಂದಿಗೆ ಸ್ವಾಮೀಜಿ ಪ್ರಾರಂಭಿಸುತ್ತಾರೆ. ಅಂತೆಯೇ ಆಯಾ ಅಧ್ಯಾಯಗಳ ಕೊನೆಯಲ್ಲಿ ಸಂಪೂರ್ಣ ಅಧ್ಯಾಯದ ಅಧ್ಯಯನದಿಂದ ಸಾಧಕನಿಗೆ ದೊರೆತ ಲಾಭದ ಅಂಶವೇನು ಎಂಬುದನ್ನು ದೃಢಪಡಿಸುವ ‘ಉಪಸಂಹಾರ’ ದೊಡನೆ ಅಂತ್ಯಗೊಳಿಸುತ್ತಾರೆ. ಈ ಉಪಕ್ರಮ- ಉಪ ಸಂಹಾರಗಳು ಪರಸ್ಪರ ಪೂರಕ, ಪೋಷಕಗಳಾಗಿದ್ದು, ತತ್ತ್ವವಿವೇಚನೆಗೆ, ಜ್ಞಾನಬೋಧೆಗೆ ಪರಮಸಹಾಯಕಗಳಾಗಿ, ಪ್ರತಿಯೊಂದು ಅಧ್ಯಾಯದಲ್ಲಿ ಪ್ರತಿಪಾದಿಸುವ ವಿಷಯದೊಡನೆ ನಿರಂತರ ಬೆಸೆದುಕೊಂಡಿವೆ. ಇದೂ ಈ ಗ್ರಂಥದ ಅನೇಕ ವೈಶಿಷ್ಟ್ಯಗಳಲ್ಲಿ ಒಂದು. ೩)ವೇದಪುರಾಣ ಉಪನಿಷತ್ತು ಸ್ಮೃತಿ... ಇತ್ಯಾದಿ ಶಾಸ್ತ್ರೀಯ ಕೃತಿಗಳ ವಿಚಾರಗಳಲ್ಲದೆ, ಶ್ರೀಶಂಕರ, ರಾಮಾನುಜ, ಮಧ್ವ, ವಲ್ಲಭ, ಮಧುಸೂಧನ ಸರಸ್ವತಿ ಮುಂತಾದ ಆಚಾರ್ಯವರ್ಯರ ಹಾಗೂ ಪಾಶ್ಚಾತ್ಯದಾರ್ಶನಿಕರ ಚಿಂತನೆಗಳನ್ನು ಶ್ರೀರಾಮಕೃಷ್ಣ ಪರಮಹಂಸ ಮತ್ತು ಸ್ವಾಮಿ ವಿವೇಕಾನಂದರ ತಾತ್ತ್ವಿಕ ಅನುಭೂತಿಯ ಹಿನ್ನೆಲೆಯಲ್ಲಿ ಮಥಿಸಿ, ಚಿಂತಿಸಿ, ಎಲ್ಲಾ ಚಿಂತನೆಗಳ ಸಮನ್ವಯವನ್ನೂ ಸ್ವಾಮೀಜಿ ಮಾಡಿದ್ದಾರೆ. ಆಯಾ ಸಂದರ್ಭಕ್ಕೆ ಅಗತ್ಯವಾದ ಶ್ರುತಿ-ಸ್ಮೃತಿ-ಸಂಹಿತಾದಿ ಕೃತಿಗಳಿಂದ




*Book:* **'Srimad Bhagavad Gita Insights and Significance'**

*written by:* **Swami Tyagishananda**
*Published by:* **Ramakrishna Mission Institute of Culure Kolkata**

*Pages:* **620** *Price:* **Rs. 400**

ಹಲವು ಆಧಾರವಾಕ್ಯಗಳನ್ನು ಸ್ವಾಮೀಜಿ ನಿರರ್ಗಳವಾಗಿ ಉದ್ಧರಿಸುತ್ತಾರೆ. ೪)ಪದಗಳ ವ್ಯುತ್ಪತ್ತಿಯನ್ನು ಆಧಾರವಾಗಿಟ್ಟುಕೊಂಡು ಗೀತೆಯಲ್ಲಿ ಬಳಕೆಯಾಗಿರುವ ಪದಗಳಿಗೆ — ಮನಸ್ಸು ಬುದ್ಧಿ ಇಂದ್ರಿಯಗಳು ತಲೆದೂಗಿ 'ಅಹುದು ಅಹುದು' ಎನ್ನುವಂತಹ, ಈ ಹಿಂದೆ ಯಾರೂ ನಿರ್ದೇಶಿಸಿರದ ವಿಶಿಷ್ಟ ಅರ್ಥಗಳನ್ನು ಸ್ವಾಮೀಜಿ ಸೂಚಿಸಿದ್ದಾರೆ. ಸ್ವಾಮೀಜಿಯವರ ಜ್ಞಾನಸಂಪನ್ನತೆಗೆ ಬೆರಗಾಗಿ ಅವರಿಗೆ ಅನಂತ ಕೋಟಿ ನಮನಗಳನ್ನು ಹೊರತುಪಡಿಸಿ ಬೇರೇನನ್ನು ತಾನೇ ಮಾಡಲು ಸಾಧ್ಯವಿದೆ! ಉದಾಹರಣೆಗೆ: ಧನಂಜಯ–ಧನ್=ಫಲಕೊಡು–ಕರ್ಮಗಳಿಗೆ ದೊರಕುವ ಫಲಗಳ ಮೇಲೆ ಜಯ ಸಾಧಿಸಿದವ, 'ಮಾಧವ'– ಮಧು–ತಮಸ್ಸು ಅಜ್ಞಾನ ಎಂಬ ತಮಸ್ಸನ್ನು ನಾಶಮಾಡಿದ, 'ಕೃಷ್ಣ'–ಆಧ್ಯಾತ್ಮಿಕ ಪ್ರಗತಿಗೆ ಪ್ರತಿಬಂಧಕವನ್ನುಂಟುಮಾಡುವ ಎಲ್ಲಾ ಅಡಚಣೆಗಳನ್ನೂ ಕರ್ಷತಿ–ಸೆಳೆದು ಬಿಡುವವನು (ದೂರ ಮಾಡುವವನು). 'ಪಾಪ'–ಪಾತಿ ರಕ್ಷತಿ ಅಸ್ಮಾದಾತ್ಮಾನಂ, ಇಂತಹುದನ್ನು ಮಾಡಬಾರದೆಂದು ತನ್ನನ್ನು ರಕ್ಷಿಸುವಂತಹುದು, ಸ್ವಾರ್ಥಪರ ಕ್ರಿಯೆ ಮಾಡುವುದರಿಂದ ಮನಸ್ಸಿನಲ್ಲಿ ಉಂಟಾಗುವ ಸಂಸ್ಕಾರ (ಪಾಪ) ಶಿಷ್ಯ–ಶಾಸನಾರ್ಹಃ – ಬಲಪ್ರಯೋಗದಿಂದಲಾದರೂ ಜ್ಞಾನಬೋಧೆ(ಆತ್ಮ ಸಾಕ್ಷಾತ್ಕಾರ) ಹೊಂದುವಂತೆ ಮಾಡಲ್ಪಡುವವನು. ಅಬ್ಬಾ! ಎಂಥ ವಿಶಿಷ್ಟ ವಿಶ್ಲೇಷಣೆ!

೫) ಸ್ವಾಮೀಜಿ ೧೮ ಅಧ್ಯಾಯಗಳನ್ನು ಮೂರು ಷಟ್ಕಗಳಾಗಿ ವಿಭಾಗಿಸಿದ್ದಾರೆ. ಅದರಲ್ಲಿ ಮೊದಲಷಟ್ಕ (೧–೬ ಅಧ್ಯಾಯಗಳು) ಧರ್ಮಗ್ರಂಥಗಳು, ಶಾಸ್ತ್ರಗ್ರಂಥಗಳು ವಿಧಿಸಿರುವ ಆಧ್ಯಾತ್ಮಿಕ ಅನುಭಾವಿಗಳು ಸಾಕ್ಷಾತ್ಕರಿಸಿಕೊಂಡಿರುವ 'ಕರ್ಮ'ತತ್ತ್ವದ ಸ್ವರೂಪ ಮತ್ತು ಅದರ ಸತ್ಯತೆಯನ್ನು ತಿಳಿಸುತ್ತದೆ. ಇವು 'ಜಗತ್ತು' ಮತ್ತು 'ಈಶ್ವರ' ಎರಡೂ ಆತ್ಯಂತಿಕ ಸತ್ಯಗಳು ಪರಸ್ಪರ ಭಿನ್ನ ಎಂದು ಪ್ರತಿಪಾದಿಸುತ್ತಾ 'ತ್ವಂ' ಪದಾರ್ಥವನ್ನೂ, ದ್ವೈತ ಸಿದ್ಧಾಂತವನ್ನೂ ಪ್ರತಿಪಾದಿಸುತ್ತದೆ ಎಂದು ಸ್ವಾಮೀಜಿ ಆಧಾರಗಳೊಡನೆ ಸಮರ್ಥಿಸುತ್ತಾರೆ.

ಎರಡನೆಯ ಷಟ್ಕ (೭–೧೨ ಅಧ್ಯಾಯಗಳು) ಇನ್ನೂ ಮನಸ್ಸಿನ ಸ್ತರದಲ್ಲೇ ಇರುವ ಭಕ್ತನು ಪ್ರೀತಿ ಮತ್ತು ಭಕ್ತಿಯಿಂದ ಅರಿತುಕೊಂಡ 'ಸತ್ಯ'ವನ್ನು ಪ್ರತಿಪಾದಿಸುತ್ತದೆ. ದಾರ ಎಲ್ಲವನ್ನೂ ಬೆಸೆದಿರುವಂತೆ 'ಅಂತರ್ಯಾಮಿ'ಯಾದ ಭಗವಂತ ಇಡೀ ಜಗತ್ತನ್ನು ಬೆಸೆದಿರುವುದನ್ನು ಭಕ್ತ ಸಾಕ್ಷಾತ್ಕರಿಸಿಕೊಳ್ಳುವನು ಎಂದು ತಿಳಿಸುತ್ತಾ 'ತತ್' ಪದಾರ್ಥವನ್ನು ಸ್ಥಾಪಿಸಿ ಈ ಆರೂ ಅಧ್ಯಾಯಗಳು ವಿಶಿಷ್ಟಾದ್ವೈತ ತತ್ತ್ವಪ್ರತಿಪಾದಕಗಳಾಗಿವೆ ಎಂದು ಸ್ವಾಮೀಜಿ ಸಿದ್ಧಪಡಿಸುತ್ತಾರೆ.

ಮೂರನೆಯ ಷಟ್ಕ (೧೩–೧೮ ಅಧ್ಯಾಯಗಳು) ಪರತತ್ತ್ವದಲ್ಲಿ ಭಕ್ತ ಮತ್ತು ಭಗವಂತ ಇವರಿಬ್ಬರ ಆತ್ಯಂತಿಕ ಏಕತೆಯನ್ನು ಪ್ರತಿಪಾದಿಸುತ್ತದೆ. ಇದು ಆಧ್ಯಾತ್ಮಿಕ ಏಣಿಯ ತುತ್ತತುದಿಯ ಮೆಟ್ಟಿಲು. ಜೀವಾತ್ಮದೊಡನೆ ಒಂದಾಗಿರುವ ಪರಮಾತ್ಮನನ್ನು 'ಅದ್ವೈತ'ಭಾವದೊಡನೆ ಸಾಧಕನು ಸಾಕ್ಷಾತ್ಕರಿಸಿಕೊಳ್ಳುವ 'ಅಸಿ' ತತ್ತ್ವವನ್ನು ಪ್ರತಿಪಾದಿಸುತ್ತವೆ ಎಂದು ಸ್ವಾಮೀಜಿ ಆಧಾರಗಳೊಡನೆ ಪ್ರತಿಪಾದಿಸುತ್ತಾರೆ. ಇದೂ ಈ ಗ್ರಂಥದ ಮತ್ತೊಂದು ವೈಶಿಷ್ಟ್ಯ. ಆತ್ಮೋದ್ಧಾರದ ಸಾಧನಭೂತಗಳಾದ ತ್ಯಾಗ–ವೈರಾಗ್ಯಗಳಿಗೆ ೧೮ ಅಧ್ಯಾಯಗಳು ವಿಶೇಷ ಪ್ರಾಶಸ್ತ್ಯ ನೀಡಿವೆ.

ಹೀಗೆ ಈ ಗ್ರಂಥವನ್ನು ಅಧ್ಯಯನ ಮಾಡುತ್ತಾ ಸಾಗುವವನಿಗೆ ಹೆಜ್ಜೆಹೆಜ್ಜೆಯಲ್ಲಿ ವೈಶಿಷ್ಟ್ಯಗಳೇ ಎದುರಾಗುತ್ತಾ ಸಾಗುತ್ತವೆ. ಒಂದೊಂದು ವಿವರಣೆಯೂ, ಒಂದೊಂದು ಪದಗಳ ತಾತ್ತ್ವಿಕ ವಿಶ್ಲೇಷಣೆಯೂ, ಸ್ವಾಮಿ ತ್ಯಾಗೀಶಾನಂದರ ಅಗಾಧ ಜ್ಞಾನಸಂಪನ್ನತೆಯನ್ನೂ, ಪ್ರೌಢಮೇಧಾಶಕ್ತಿಯನ್ನೂ, ಗಭೀರ ಆಧ್ಯಾತ್ಮಿಕ ಅನುಭಾವವನ್ನೂ ಸೂಚಿಸುತ್ತವೆ.

ಸ್ವಾಮಿ ತ್ಯಾಗೀಶಾನಂದರ ಗೀತಾ ತರಗತಿಯ ಪಾಠಗಳನ್ನು (೧೯೪೫–೫೦ ಕಾಲದಲ್ಲಿ) ಮಾಡಿಕೊಂಡು ಇಂತಹ ಒಂದು ವಿಶಿಷ್ಟಕೃತಿಯನ್ನು ಲೋಕಾರ್ಪಣೆ ಮಾಡಿ ಲೋಕೋಪಕಾರ ಮಾಡಿದ ಸ್ವಾಮಿ ಕೀರ್ತಿದಾನಂದರು ಅಭಿನಂದಾರ್ಹರು, ವಂದನೀಯರು.

೬) ಈ ಕೃತಿಯ ಗರಿಮೆಯ ಮತ್ತೊಂದು ಗರಿ, ಇದರಲ್ಲಿರುವ ೧೪ ವಿಶಿಷ್ಟ ಅನುಬಂಧಗಳು. ಭಗವಂತನ ವಿವಿಧ ನಾಮಗಳ ವಿಶ್ಲೇಷಣೆ, 'ಕಾಮ' ಪದದ ವ್ಯಾಪಕ ಅರ್ಥ ಇತ್ಯಾದಿ ಅನೇಕ ದಾರ್ಶನಿಕ ವಿಚಾರಗಳ ಕುರಿತು ಇವು ಶಾಸ್ತ್ರೀಯ ತಾತ್ತ್ವಿಕ ಒಳನೋಟ ನೀಡುತ್ತವೆ. ಈ ಕಾರಣಗಳಿಂದ ಇದು ಒಂದು ವಿಶ್ವಕೋಶ ಎಂದರೆ ಅದು ಉತ್ಪ್ರೇಕ್ಷೆಯ ಮಾತಾಗುವುದಿಲ್ಲ.

*— ಡಾ. ಕೆ.ಎಲ್.ಪ್ರಸನ್ನಾಕ್ಷೀ*

## ಸ್ವಾಮೀಜಿ ಮತ್ತು ಬ್ರಹ್ಮಾನಂದರು

ಒಮ್ಮೆ ಸ್ವಾಮಿ ವಿವೇಕಾನಂದರು ತಮ್ಮ ಗುರುಭಾಯಿಗಳನ್ನೆಲ್ಲಾ ಒಂದು ಸಭೆಗೆ ಕರೆದರು. ಮಠ ನಡೆಸಲು ಬರೆದ ನಿಯಮಾವಳಿಗಳನ್ನೆಲ್ಲಾ ಎಲ್ಲರಿಗೂ ತೋರಿಸಿ, ಒಪ್ಪಿಗೆ ಪಡೆಯುವ ಉದ್ದೇಶ ಸ್ವಾಮೀಜಿಯವರದ್ದು. ಪ್ರತಿಯೊಬ್ಬ ಗುರುಭಾಯಿಗೂ ಅದನ್ನು ಓದಿ ತಮ್ಮ ಅಭಿಪ್ರಾಯ ನೀಡಲು ಆದೇಶವಿತ್ತರು. ಎಲ್ಲರೂ ಓದಿ ತಮ್ಮ ಮೆಚ್ಚುಗೆ ವ್ಯಕ್ತಪಡಿಸಿದರು. ಒಬ್ಬಿಬ್ಬರು ಒಂದೆರಡು ನಿಯಮಗಳ ಕುರಿತು ಟೀಕಿಸಿದರು, ಚರ್ಚೆ ಮುಂದುವರೆಯಿತು. ಆದರೆ ಸ್ವಾಮಿ ಬ್ರಹ್ಮಾನಂದರು ಮಾತ್ರ ಮೌನವಾಗಿ ಕುಳಿತಿರುವುದನ್ನು ಕಂಡು ಸ್ವಾಮೀಜಿ, 'ರಾಜಾ, ನೀನೇಕೆ ಒಂದು ಮಾತನ್ನೂ ಆಡದೆ ಕುಳಿತಿರುವೆ? ನಿನಗೆ ಈ ನಿಯಮಾವಳಿಗಳು ಒಪ್ಪಿಗೆಯಾಗಲಿಲ್ಲವೆ?' ಮಹಾರಾಜರು 'ಇಲ್ಲ ಸ್ವಾಮೀಜಿ, ನನಗೆ ಹಿಡಿಸಲಿಲ್ಲ' ಎಂದರು. ಆಗ ಸ್ವಾಮೀಜಿ ಏನು ಮಾಡಿದರು? ತಕ್ಷಣವೇ ಆ ಕಾಗದಗಳನ್ನೆಲ್ಲಾ ಹರಿದು ಕಸದ ಬುಟ್ಟಿಗೆ ಹಾಕಿಬಿಟ್ಟರು!




# ಸ್ವಾಮಿ ಅಭೇದಾನಂದರನ್ನು ಕುರಿತ ಗ್ರಂಥ :
# ‘Swami Abhedananda - A Yogi Par Excellence’

ಸ್ವಾಮಿ ಅಭೇದಾನಂದರ ನೂರೈವತ್ತನೇ ಜನ್ಮದಿನ ಸಮಾರಂಭಗಳ ಭಾಗವಾಗಿ ಚೆನ್ನೈ ರಾಮಕೃಷ್ಣ ಮಠವು ‘Swami Abhedananda - A Yogi Par Excellence’ ಎಂಬ ಪುಸ್ತಕವನ್ನು ಹೊರತಂದಿದೆ. ವಿವಿಧ ಮೂಲಗಳಿಂದ ವಸ್ತುವನ್ನು ಆಯ್ದು, ಲಭ್ಯವಿರುವ ಉತ್ತಮ ಫೋಟೋಗಳನ್ನು ಸೇರಿಸಿ ಇದನ್ನು ಸಂಗ್ರಹಿಸಿದವರು ಸ್ವಾಮಿ ಸುರಾರ್ಚಿತಾನಂದ ಹಾಗೂ ಶ್ರೀಮತಿ ರುಚಿರಾ ಮಿತ್ರ. ೨೭೨ ಪುಟಗಳ ಈ ಪುಸ್ತಕದಲ್ಲಿ ಪರಿವಿಡಿ, ಫೋಟೋಗಳು, ಅನುಬಂಧಗಳ ಪುಟಗಳನ್ನು ತೆಗೆದರೆ ೧೮೬ ಪುಟಗಳ ಪಠ್ಯ ಮಾತ್ರ ಇದೆ. ಇದರಲ್ಲಿ ೧೬ ಪುಟ್ಟ ಪುಟ್ಟ ಅಧ್ಯಾಯಗಳಿದ್ದು, ಓದಲು ಸುಲಭವಾಗಿದೆ. ಸ್ವಾಮಿ ವಿವೇಕಾನಂದರ ಅನಂತರ ವಿದೇಶಗಳಲ್ಲಿ ಭಾಷಣಕಾರರಾಗಿ ಪ್ರಖ್ಯಾತರಾದ ಸ್ವಾಮಿ ಅಭೇದಾನಂದರ ಹಾಗೂ ಅವರ ಬಗೆಗಿನ ವಿಸ್ತಾರವಾದ ಸಾಹಿತ್ಯರಾಶಿಯನ್ನು ಗಮನಿಸಿದಲ್ಲಿ, ಇಂತಹ ಕುತೂಹಲಕಾರಿ ಸನ್ನಿವೇಶಗಳ ಸಂಗ್ರಹದ ಸಂಕ್ಷಿಪ್ತ ಜೀವನ ಚರಿತ್ರೆಯ ಪ್ರಕಟಣೆ ಸ್ವಾಗತಾರ್ಹ ಎನ್ನಿಸುತ್ತದೆ.

ಕುತೂಹಲ ಹುಟ್ಟಿಸುವ ಆಶ್ಚರ್ಯಕರ ಸಂಗತಿಗಳೇ ಇಲ್ಲಿ ಇವೆ. ಪೀಠಿಕೆಯಲ್ಲಿ ಕೇಶವಚಂದ್ರಸೇನನು ಶ್ರೀರಾಮಕೃಷ್ಣರಿಗೆ ತಮ್ಮ ಅನುಮತಿ ಇದ್ದಲ್ಲಿ ಇಲ್ಲಿನ ವಿಚಾರಗಳನ್ನು ಭಾಷಣಗಳು ಮತ್ತು ಪತ್ರಿಕಾ ಲೇಖನಗಳ ಮೂಲಕ ಜಗತ್ತಿನಲ್ಲಿ ಹರಡುವೆನು ಎಂದು ಕೇಳಿಕೊಂಡಾಗ ಅವರು ಭಾವಸ್ಥಿತಿಯಲ್ಲಿ— ‘‘ಇಲ್ಲಿನ ಸಂದೇಶವನ್ನು ಹಾಗೆ ಪ್ರಚಾರ ಮಾಡುವ ಕಾಲ ಬಂದಿಲ್ಲ. ಈ ಶರೀರದೊಳಗಿನ ಶಕ್ತಿ ಸಂದೇಶಗಳು ಕಾಲಾನುಕ್ರಮದಲ್ಲಿ ತನ್ನಿಂದ ತಾನೇ ಹರಡಲಿವೆ. ನೂರಾರು ಹಿಮಾಲಯಗಳೂ ಈ ಶಕ್ತಿಪಾತವನ್ನು ತಡೆದು ಹಿಡಿಯಲಾರವು’’ ಎನ್ನುತ್ತಾರೆ. ಬಹುಶಃ ತಮ್ಮ ಶಿಷ್ಯರ ಜೀವನವನ್ನು ನೋಡಿಯೇ ಜನರು ಆ ಸಂದೇಶವನ್ನು ಗ್ರಹಿಸುವರು ಎನ್ನುವ ಭಾವ ಇಲ್ಲಿದೆ.

ಸ್ವಾಮಿ ವಿವೇಕಾನಂದರು, ‘‘ಯಾವುದೇ ಧಾರ್ಮಿಕ ಆಂದೋಲನವು ವಿವೇಕವನ್ನು ಬೆಳೆಸಿಕೊಳ್ಳದಿದ್ದಲ್ಲಿ ಮೊದಲು ಭಕ್ತಿಯ ವಿಸ್ಫೋಟಗಳಿಗೆ ಇಳಿದು, ಮತಾಂಧತೆ ಹಾಗೂ ಪಂಥೀಯತೆಯಾಗಿ ಅವನತಿಹೊಂದುತ್ತದೆ. ಪ್ರವಾದಿಗಳು ನಮ್ಮ ಭಾವನೆಗಳನ್ನು ರಂಜಿಸುತ್ತಾರೆ; ಮೇಲ್ಮಟ್ಟದ ತತ್ತ್ವ ನಿಯಮಗಳು ನಮ್ಮ ಶಾಂತ ನಿರ್ಣಯಶಕ್ತಿಗೆ ಮಾತ್ರ ನಿಲುಕುತ್ತವೆ. ಇಂದ್ರಿಯ ಸಂಬಂಧಿಯಾದ ಭಾವನೆಗಳು ನಮ್ಮನ್ನು ಪಶುಗಳ ಮಟ್ಟಕ್ಕೆ ಎಳೆಯುತ್ತವೆ, ವಿಚಾರಕ್ಕೆ ಸಂಬಂಧಿಸುವುದಕ್ಕಿಂತ ಇದು ಸುಲಭ. ಆದ್ದರಿಂದ ತತ್ತ್ವಗಳು ಸಾಮಾನ್ಯರ ಕಣ್ಣಿಗೆ ಬೀಳದಿದ್ದು, ಭಾವನೆಗಳು ಮೇಲ್ಮೈ ಪಡೆದಾಗ ಧರ್ಮವು ಮತಾಂಧತೆಯಾಗಿ ಅವನತಿ ಹೊಂದುತ್ತದೆ’’ ಎನ್ನುತ್ತಾರೆ. ಅಭೇದಾನಂದರು ಯಾವಾಗಲೂ ವಿವೇಕಕ್ಕೆ ಹಿತವಾಗುವಂತೆ ಶ್ರೀರಾಮಕೃಷ್ಣರ ವಿಚಾರಗಳ ಹಿನ್ನೆಲೆಯಲ್ಲಿ ವೇದಾಂತವನ್ನು ಪ್ರಚುರಗೊಳಿಸಿದರು. ಅವರ ತಾತ್ತ್ವಿಕ ಒಳನೋಟ, ಉಜ್ವಲ ವೈಚಾರಿಕತೆ, ಅಧ್ಯಾತ್ಮ ಇವು ಪಾಶ್ಚಾತ್ಯ ಧೀಮಂತರನ್ನು ಆಕರ್ಷಿಸಿ, ಅವರ ಭಾಷಣಗಳನ್ನು ಪುಸ್ತಕರೂಪದಲ್ಲಿ ಹೊರತರಲು ಪ್ರೇರಿಸಿ, ಅವರ ವಿಚಾರ ಹೆಚ್ಚು ಜನರನ್ನು ಪ್ರೇರಿಸುವಂತೆ ಆಯಿತು.




*Book:* **'Swami Abhedananda - A Yogi Par Excellence'**
*Compiled by:* **Swami Surarchitananda & Smt. Ruchira Mitra**
*Published by:* **Sri Ramakrishna Math, Mylapore, Chennai-4**
*Pages:* **272** *Price:* **Rs. 300**

ಈ ಪುಸ್ತಕದ ಬಹುಭಾಗ ಸ್ವಾಮಿ ಅಭೇದಾನಂದರು ಬರೆದ ಆತ್ಮಚರಿತ್ರೆ, ಹಾಗೂ ಆಧ್ಯಾತ್ಮಿಕ ಚರಿತ್ರೆಯಿಂದ ಆಯ್ದ ಉದ್ಧರಣೆಗಳನ್ನು ಒಳಗೊಂಡಿದ್ದರಿಂದ, ಒಂದು ತೀವ್ರತೆ ಇಲ್ಲಿದೆ. ಉಳಿದಂತೆ, ಅವರ ಜೊತೆ ಕೆಲಸ ಮಾಡಿದ ಸೋದರಿ ಶಿವಾನಿ, ಮೋನಿ ಬಾಗ್ಚಿ, ಸ್ವಾಮಿ ಶಂಕರಾನಂದ, ಸ್ವಾಮಿ ತಥಾಗತಾನಂದ ಅಲ್ಲದೆ ಸ್ವಾಮಿ ಚೇತನಾನಂದ, ಸ್ವಾಮಿ ಅಪೂರ್ವಾನಂದ ಮೊದಲಾದವರ ಕೃತಿಗಳಿಂದಲೂ ಉದ್ಧರಣೆಗಳಿವೆ. ಸ್ವಾಮಿ ಅಭೇದಾನಂದರ ಸಂಪೂರ್ಣ ವ್ಯಕ್ತಿಚಿತ್ರ ಓದುಗರಿಗೆ ಲಭ್ಯವಾಗುವಂತೆ ಈ ಪುಸ್ತಕದ ರಚಯಿತರು ಶ್ರಮವಹಿಸಿದ್ದಾರೆ. ಓದಲೇಬೇಕಾದ ಪುಸ್ತಕ ಇದು.

— *ಡಾ. ಹೆಚ್. ಪಾಂಡುರಂಗ ವಿಠಲ*

# ಅನ್ನದಿಂದ ಆನಂದದೆಡೆಗೆ...

## (ತೈತ್ತಿರೀಯೋಪನಿಷತ್ತು – ೨)

ಸ್ವಾಮಿ ವೀರೇಶಾನಂದ



ತೈತ್ತಿರೀಯ ಉಪನಿಷತ್ತಿನ ಆನಂದವಲ್ಲಿಯಲ್ಲಿ ಬ್ರಹ್ಮವು **ಸತ್ಯಮ್, ಜ್ಞಾನಮ್ ಮತ್ತು ಅನಂತಮ್** – ಈ ಮೂರು ಲಕ್ಷಣಗಳನ್ನು ಒಳಗೊಂಡಿದ್ದು ಎಂದು ನಾವು ತಿಳಿದುಕೊಂಡೆವು. ಆ ಬ್ರಹ್ಮವು ಆಕಾಶವೇ ಮೊದಲಾದ ಎಲ್ಲ ಸೃಷ್ಟಿಪ್ರಕಾರಗಳನ್ನು ಸೃಷ್ಟಿಸುತ್ತದೆ ಮತ್ತು ಅವುಗಳ ಒಳಹೊಕ್ಕು, ಅನೇಕ ವಿಶೇಷಣಗಳಿಂದ ಕೂಡಿಕೊಂಡಿರುತ್ತದೆ. ಹೀಗೆಂದು ತಿಳಿದುಕೊಂಡ ಜ್ಞಾನಿಗೆ ಪುಣ್ಯಪಾಪಗಳು ಉಂಟಾಗುವುದಿಲ್ಲ; ಹಾಗೂ ಆ ಪುಣ್ಯಪಾಪಗಳು ಜನ್ಮಗಳಿಗೆ ಕಾರಣವಾಗುವುದಿಲ್ಲ. ಇದೇ ಆನಂದವಲ್ಲಿಯ ಸಾರ. ಮುಂದಿನ ಅಧ್ಯಾಯವನ್ನು 'ಭೃಗುವಲ್ಲೀ' ಎಂದು ಕರೆಯಲಾಗಿದೆ. ಇದರಲ್ಲಿ ಬ್ರಹ್ಮವಿದ್ಯೆಗೆ ಸಾಧನವಾದ ತಪಸ್ಸನ್ನು ವಿಶೇಷವಾಗಿ ಒತ್ತಿಹೇಳಲಾಗಿದೆ. ಹಾಗೆಯೇ ಅನ್ನೋಪಾಸನೆ ಮುಂತಾದ ಅನೇಕ ಉಪಾಸನೆಗಳನ್ನೂ ಉಪದೇಶಿಸಲಾಗಿದೆ. ಗುರುಶಿಷ್ಯರ ಉಪದೇಶದ ವಿಧಾನದಲ್ಲಿ ಉಪನಿಷತ್ತು ಈ ವಿಷಯಗಳನ್ನು ನಮಗೆ ವಿವರಿಸುತ್ತದೆ.

### ''ಭಗವಂತನೇ, ಬ್ರಹ್ಮವನ್ನು ಹೇಳಿಕೊಡು''

ಭೃಗು ಎನ್ನುವುದು ಅವನ ಹೆಸರು. ಅವನು ವಾರುಣಿ, ಎಂದರೆ ವರುಣನೆಂಬ ಮಹಾನ್ ಋಷಿಯ ಪುತ್ರ. ಅವನು ತನ್ನ ತಂದೆಯನ್ನೇ ಗುರುವಾಗಿ ಸ್ವೀಕರಿಸಿದನು. ತಂದೆಯಾದ ವರುಣನನ್ನು ಸಮೀಪಿಸಿದನು. ''ಭಗವಂತನೇ, ಬ್ರಹ್ಮವನ್ನು ಹೇಳಿಕೊಡು'' ಎಂದು ಕೇಳಿಕೊಂಡನು. ಗುರುವು ನೇರವಾಗಿ ಬ್ರಹ್ಮವನ್ನು ಹೇಳಿಕೊಡಲಿಲ್ಲ. ಇದಕ್ಕೆ ಬದಲಾಗಿ ಚೈತನ್ಯರೂಪವಾದ ಬ್ರಹ್ಮವು ನಮಗೆ ಅನುಭವಕ್ಕೆ ಬರುವ ದ್ವಾರಗಳನ್ನು ಮೊದಲು ಹೀಗೆ ಉಪದೇಶಿಸಿದನು: ''ಮಗೂ, ಆಹಾರದಿಂದ ಮಾಡಲ್ಪಟ್ಟ ಈ ಶರೀರವು ಬ್ರಹ್ಮದ ಮೊದಲನೆಯ ದ್ವಾರ. ಇದನ್ನು ಧರಿಸಿರುವುದು ಪ್ರಾಣವಲ್ಲವೇ, ಮಗೂ. ಹೀಗಾಗಿ ಪ್ರಾಣವು ಬ್ರಹ್ಮ ಅಥವಾ ಚೈತನ್ಯವು ನಮ್ಮ ಅನುಭವಕ್ಕೆ ಬರುವ ಎರಡನೆಯ ದ್ವಾರವಾಗಿದೆ. ಮಗೂ, ಅದೇ ರೀತಿ ಬ್ರಹ್ಮವನ್ನು ಅರಿತುಕೊಳ್ಳುವುದಕ್ಕೆ ಉಪಯೋಗಕರವಾದ ಇನ್ನಿತರ ದ್ವಾರಗಳೆಂದರೆ, ಚೈತನ್ಯವು ಅರಿವಿಗೆ ಬರುವ ಕಣ್ಣು , ಕಿವಿ, ಮನಸ್ಸು ಮತ್ತು ಮಾತುಗಳು. ತಿಳಿಯಿತೆ?''

ಭೃಗುವಿಗೆ ಇನ್ನೂ ತಿಳಿವಾಗಲಿಲ್ಲ ಎನ್ನುವುದು ಗುರುವಿಗೆ ವೇದ್ಯವಾಯಿತು. ''ಮಗೂ, ನಾನು ಹೇಳಿದ ದ್ವಾರಗಳೆಲ್ಲವೂ ಅರಿವು, ಜ್ಞಾನ ಅಥವಾ ಚೈತನ್ಯವನ್ನು ಪರಿಭಾವಿಸುವ ಸಾಧನಗಳು, ಅಲ್ಲವೆ? ಈ ಎಲ್ಲ ದ್ವಾರಗಳ ಮೂಲಕ ಚೈತನ್ಯ ಅಥವಾ ಅರಿವು ಕಿಟಕಿ ಅಥವಾ ಒಂದು ರಂಧ್ರದ ಮೂಲಕ ಹಾದುಬರುವ ಸೂರ್ಯನ ಬೆಳಕಿನಂತೆ, ಹಾದು ಬರುತ್ತದೆ. ಈ ಸೀಮಿತ ಅರಿವು ಅಥವಾ ಚೈತನ್ಯವೇ ನಮ್ಮ ಎಲ್ಲ ಅನುಭವಗಳಿಗೆ ಕಾರಣವಾಗಿದೆ. ಹಾಗೆ ನೋಡಿದರೆ, ಈ ಅರಿವು, ಚೈತನ್ಯವೇ ಅನುಭವ. ಅನುಭವ ಎನ್ನುವುದೇ ಚೈತನ್ಯ. ಇದೇ ಬ್ರಹ್ಮ.''

ಭೃಗುವಿನ ಮುಖ ಹಿಗ್ಗಿತು. ಇವನಿಗೆ ಅರ್ಥವಾಯಿತು ಎಂದು ತಿಳಿದುಕೊಂಡ ವರುಣನು ತನ್ನ ಉಪದೇಶವನ್ನು ಮುಂದುವರೆಸಿದನು. ''ಮಗೂ, ನಾನು ನಿನಗೆ ಬ್ರಹ್ಮನ ದ್ವಾರಗಳನ್ನು ಹೇಳಿದೆ. ಇವುಗಳ ಮೂಲಕ ಯಾವ ಬ್ರಹ್ಮಚೈತನ್ಯವು ಅನುಭವಕ್ಕೆ ಬರುತ್ತದೆಯೋ, ಅದರ ಲಕ್ಷಣವನ್ನು ಕೇಳಿತಿಳಿದುಕೊ. ಮಗೂ, ಯಾವ ಕಾರಣದಿಂದ ಹಿರಣ್ಯಗರ್ಭದಿಂದ ಹಿಡಿದು ಸ್ಥಾವರವಾದ ಸಸ್ಯಗಳವರೆಗೆ ಪ್ರಾಣಿಗಳು ಹುಟ್ಟುತ್ತವೆಯೋ, ಹುಟ್ಟಿದ ಬಳಿಕ ಯಾವುದರಲ್ಲಿ ಇವೆಲ್ಲವೂ ಜೀವಿಸುತ್ತವೆಯೋ ಅಂದರೆ ಪ್ರಾಣವನ್ನು ಧರಿಸಿರುತ್ತವೆಯೋ, ಬೆಳೆಯುತ್ತ ಇರುತ್ತವೆಯೋ, ಹಾಗೂ ಕಡೆಯಲ್ಲಿ ತಮ್ಮ ನಾಮ-ರೂಪಗಳೆಂಬ ವೈವಿಧ್ಯಗಳನ್ನು ಕಳೆದುಕೊಂಡು, ಯಾವುದನ್ನು ಕುರಿತು ಹೋಗುತ್ತವೆಯೋ, ಯಾವುದರ ಕಡೆಗೆ ಎಲ್ಲವೂ ವಿಲೀನವಾಗಲು ಮುಂದುವರಿಯು

ತ್ತದೆಯೋ, ಅದೇ ರೂಪವಾಗಿ ಬಿಡುವವೋ — ಅದೇ ಬ್ರಹ್ಮ. ಮಗೂ, ಸೃಷ್ಟಿಕಾಲದಲ್ಲಾಗಲಿ, ಸ್ಥಿತಿಕಾಲದಲ್ಲಾಗಲಿ, ಪ್ರಳಯಕಾಲ ದಲ್ಲಿಯಾಗಲಿ – ಜೀವಿಗಳು ಬ್ರಹ್ಮರೂಪವಾಗಿಯೇ ಇರುತ್ತವೆ. ಅವು ಎಂದೂ ತಮ್ಮ ನಿಜಸ್ವರೂಪವನ್ನು ಬಿಟ್ಟುಬಿಡುವುದೇ ಇಲ್ಲ.''

### ಭೃಗುವಿನ ತಪಸ್ಸು

ಈ ಉಪದೇಶವನ್ನು ಕೇಳಿಸಿಕೊಂಡ ಭೃಗುವು ಒಂದು ಅಂಶ ವನ್ನು ಗಮನಿಸಿದನು. ಗುರುವೂ ತಂದೆಯೂ ಆದ ವರುಣನು ಬ್ರಹ್ಮನ ಉಪದೇಶವನ್ನು ಮಾಡಿದನೇನೋ ನಿಜ. ಆದರೆ ಅವನು ಬ್ರಹ್ಮನ ಪರಿಶುದ್ಧ ಲಕ್ಷಣವನ್ನು ಉಪದೇಶ ಮಾಡಲಿಲ್ಲ. ಬ್ರಹ್ಮನು ಸೃಷ್ಟಿಕರ್ತನೆಂದು ಉಪದೇಶ ಮಾಡಿದನು. ಹೀಗಾಗಿ ಸವಿಶೇಷ ಬ್ರಹ್ಮನ ಉಪದೇಶವನ್ನೇ ಮಾಡಿದಹಾಗಾಯಿತು. ಆದರೆ ಬ್ರಹ್ಮವು ನಿರ್ವಿಶೇಷನೆಂದು ಭೃಗುವು ತಿಳಿದಿದ್ದನು. ''ಹಾಗಾದರೆ ತನ್ನ ತಂದೆಯು ಇದನ್ನು ನನಗೆ ಏಕೆ ತಾನೇ ಉಪದೇಶ ಮಾಡಲಿಲ್ಲ?'' ಹೀಗೆ ಯೋಚನೆ ಮಾಡಿದ ಭೃಗುವು ಇದರಲ್ಲಿ ತನ್ನ ತಂದೆಯ ಆಶಯವನ್ನು ಕಂಡುಹಿಡಿದುಕೊಂಡನು. ತಾನು ಇನ್ನೂ ನಿರ್ವಿ ಶೇಷ ಬ್ರಹ್ಮನ ಉಪದೇಶಕ್ಕೆ ಯೋಗ್ಯನಲ್ಲ ಎಂದು ತನ್ನ ತಂದೆಯು ಬಗೆದಿದ್ದಾನೆ ಎಂದು ಅರಿತುಕೊಂಡನು. ತಾನು ಈ ಬಗೆಯ ಉಪದೇಶಕ್ಕೆ ಯೋಗ್ಯನಾಗಲು ಏನು ತಾನೇ ಮಾಡಬೇಕು? ಭೃಗುವು ಅದಕ್ಕಾಗಿ ತಾನು ತಪಸ್ಸನ್ನು ಮಾಡಬೇಕು ಎಂದು



ನಿಶ್ಚಯಿಸಿದನು. ಇದೇ ತನ್ನ ತಂದೆಯ ಆಶಯ ಎಂದು ತಿಳಿದು ಕೊಂಡನು. ಹೀಗಾಗಿ ತಪಸ್ಸು ಮಾಡಲು ಮನಸ್ಸು ಮಾಡಿದನು.

ಅವನು ಒಂದು ವರ್ಷ ತಪಸ್ಸು ಮಾಡಿದನು. ತಪಸ್ಸು ಮಾಡಿ, ತನ್ನ ತಂದೆಯ ಬಳಿಗೆ ಬಂದನು. ಈ ವೇಳೆಗೆ ಅವನು ಅನ್ನ ಅಥವಾ ಆಹಾರವೇ ಬ್ರಹ್ಮನೆಂದು ಅರಿತುಕೊಂಡನು. ಬ್ರಹ್ಮನ ಈ ಬಗೆಯ ಅರಿವು, ತನ್ನ ತಂದೆಯು ಈಗಾಗಲೇ ಮಾಡಿದ ಉಪದೇಶಕ್ಕೆ ಹೊಂದಿಕೊಂಡಂತೆ ಇದೆ ಎಂದು ಅವನು ಮನಗಂಡನು. ಏಕೆಂದರೆ, ಎಲ್ಲ ಜೀವಿಗಳು ಹುಟ್ಟುವುದು ಆಹಾರದಿಂದಲೇ. ಎಲ್ಲ ಜೀವಿಗಳು ಕೂಡ ಬದುಕಿ ಬಾಳುವುದು ಕೂಡ ಆಹಾರದಿಂದಲೇ. ಹಾಗೆಯೇ ಎಲ್ಲ ಜೀವಿಗಳು ಯಾವು ದನ್ನು ಕುರಿತು ಮುಂದುವರೆದು ಹೋಗುತ್ತ, ಕಡೆಯಲ್ಲಿ ವಿಲೀನ ವಾಗುತ್ತವೆಯೋ, ಅದೂ ಕೂಡ ಆಹಾರವೇ. ಹೀಗಾಗಿ ಆಹಾ ರವೇ ಬ್ರಹ್ಮ ಎಂದು ತನ್ನ ತಪಸ್ಸಿನ ಮೂಲಕವಾಗಿ ಭೃಗುವು ಅರಿತುಕೊಂಡನು.

ಆದರೆ ಈ ಬಗೆಯ ಜ್ಞಾನವು ಬ್ರಹ್ಮನ ಪರಿಪೂರ್ಣ ಜ್ಞಾನವಲ್ಲ ಎಂಬ ಕೊರಗು ಅವನ ಮನಸ್ಸಿನ ಆಳದಲ್ಲಿ ಇದ್ದೇ ಇತ್ತು. ಹೀಗಾಗಿ ಒಂದು ವರ್ಷದ ತಪಸ್ಸಿನ ನಂತರ, ಅವನು ತಂದೆಯಾದ ವರುಣ ನನ್ನು ಮತ್ತೆ ಬಳಿಸಾರಿದನು. ''ಭಗವಂತನೇ ನನಗೆ ಬ್ರಹ್ಮವನ್ನು ಹೇಳಿಕೊಡು'' ಎಂದು ಅಂಗಲಾಚಿದನು. ಈ ಸಲ ವರುಣನು ಸ್ಪಷ್ಟವಾಗಿ ಹೇಳಿಬಿಟ್ಟನು. ''ಮಗೂ, ತಪಸ್ಸಿನಿಂದಲೇ ಬ್ರಹ್ಮವನ್ನು ತಿಳಿದುಕೊಳ್ಳಲು ನೀನು ಇಚ್ಛಿಸಬೇಕಪ್ಪಾ. ಏಕೆಂದರೆ ಬ್ರಹ್ಮವನ್ನು ಅರಿತುಕೊಳ್ಳುವುದಕ್ಕೆ ತಪಸ್ಸೇ ಮುಖ್ಯಸಾಧನವಾಗಿದೆ. ಹೀಗಾಗಿ ಒಂದರ್ಥದಲ್ಲಿ ತಪಸ್ಸೇ ಬ್ರಹ್ಮ'' ಎಂದನು.

ತನ್ನ ಗುರುವಿನ ಆದೇಶದಂತೆ ಇನ್ನೂ ಒಂದು ವರ್ಷ ಭೃಗುವು ತಪಸ್ಸು ಮಾಡಿದನು. ಆಗ ಅವನಿಗೆ ಅರಿವಿಗೆ ಬಂದಿತು, ಪ್ರಾಣವೇ ಬ್ರಹ್ಮ ಎಂದು. ಏಕೆಂದರೆ ಪ್ರಾಣದ ಮೂಲಕವೇ ಎಲ್ಲ ಜೀವಿಗಳೂ ಹುಟ್ಟುತ್ತವೆ. ಪ್ರಾಣದಿಂದಲೇ ಹುಟ್ಟಿ ಜೀವಿಸುತ್ತವೆ. ಕಟ್ಟಕಡೆಗೆ ಪ್ರಾಣವನ್ನು ಕುರಿತು ಹೋಗಿ, ಅದನ್ನೇ ಹೋಗಿ ಸೇರಿಕೊಳ್ಳುತ್ತವೆ. ಇಷ್ಟಾದರೂ ಬ್ರಹ್ಮವನ್ನು ಪೂರ್ತಿಯಾಗಿ ತಿಳಿದು ಕೊಂಡಿದ್ದೇನೆ ಎಂದು ಅವನಿಗೆ ಅನ್ನಿಸಲಿಲ್ಲ. ಆದ್ದರಿಂದ ಭೃಗುವು ತನ್ನ ತಂದೆಯ ಬಳಿಗೆ ಮತ್ತೆ ಹೋದನು. ''ಭಗವಂತನೇ ನನಗೆ ಬ್ರಹ್ಮವನ್ನು ಹೇಳಿಕೊಡು'' ಎಂದು ಬೇಡಿಕೊಂಡನು. ವರುಣನು ಮತ್ತೆ ತನ್ನ ಉಪದೇಶವನ್ನು ಪುನರುಚ್ಚರಿಸಿದನು: ''ಮಗೂ, ತಪಸ್ಸಿನಿಂದಲೇ ಬ್ರಹ್ಮವನ್ನು ತಿಳಿದುಕೊಳ್ಳಲು ನೀನು ಇಚ್ಛಿಸ ಬೇಕಪ್ಪಾ. ಏಕೆಂದರೆ ಬ್ರಹ್ಮವನ್ನು ಅರಿತುಕೊಳ್ಳುವುದಕ್ಕೆ ತಪಸ್ಸೇ ಮುಖ್ಯ ಸಾಧನವಾಗಿದೆ. ಹೀಗಾಗಿ ಒಂದರ್ಥದಲ್ಲಿ ತಪಸ್ಸೇ ಬ್ರಹ್ಮ.''

ಹಿಂದಿನ ಪ್ರಕಾರದಲ್ಲಿಯೇ ಭೃಗುವು ತಪಸ್ಸು ಮಾಡಿದನು. ತದನಂತರ, ಸಮಷ್ಟಿ ಮನಸ್ಸೇ ಬ್ರಹ್ಮ ಎಂಬ ಅರಿವು ಅವನಿಗೆ

ಬಂತು. ಏಕೆಂದರೆ ಅವನು ಹೀಗೆ ತಿಳಿದುಕೊಂಡನು: 'ಸಮಷ್ಟಿ ಮನಸ್ಸಿನ ಮೂಲಕವೇ ಎಲ್ಲ ಜೀವಿಗಳು ಹುಟ್ಟುತ್ತವೆ; ಎಲ್ಲ ಜೀವಿಗಳೂ ಜೀವಿಸುತ್ತವೆ; ಎಲ್ಲ ಜೀವಿಗಳೂ ಮನಸ್ಸನ್ನು ಕುರಿತೇ ಹೋಗುತ್ತ, ಅದರಲ್ಲಿಯೇ ವಿಲೀನವಾಗುತ್ತವೆ.' ಹೀಗೆ ಅರಿತುಕೊಂಡರೂ, ಅವನ ಮನಸ್ಸಿಗೆ ಸಮಾಧಾನ ಉಂಟಾಗಲಿಲ್ಲ. ತಾನು ಇನ್ನೂ ಬ್ರಹ್ಮವನ್ನು ಪೂರ್ಣವಾಗಿ ತಿಳಿದುಕೊಂಡಿಲ್ಲವೆಂದು ಭಾವಿಸಿ ಖೇದಗೊಂಡು, ಭೃಗುವು ವರುಣನ ಹತ್ತಿರ ಮತ್ತೆ ಹೋದನು. ''ಭಗವಂತನೇ, ನನಗೆ ಬ್ರಹ್ಮವನ್ನು ಹೇಳಿಕೊಡು'' ಎಂದು ಕೇಳಿಕೊಂಡನು. ವರುಣನು ಮತ್ತೆ ಹೇಳಿದನು: ''ಮಗೂ, ತಪಸ್ಸಿನಿಂದಲೇ ಬ್ರಹ್ಮವನ್ನು ತಿಳಿದುಕೊಳ್ಳಲು ನೀನು ಇಚ್ಛಿಸಬೇಕಪ್ಪಾ. ಏಕೆಂದರೆ ಬ್ರಹ್ಮವನ್ನು ಅರಿತುಕೊಳ್ಳುವುದಕ್ಕೆ ತಪಸ್ಸೇ ಮುಖ್ಯಸಾಧನವಾಗಿದೆ. ಹೀಗಾಗಿ ಒಂದರ್ಥದಲ್ಲಿ ತಪಸ್ಸೇ ಬ್ರಹ್ಮ.''

ಹಿಂದೆ ಮಾಡಿದಂತೆಯೇ, ಭೃಗುವು ಮತ್ತೂ ತಪಸ್ಸು ಮಾಡಿದನು. ಬುದ್ಧಿ ಅಥವಾ ವಿಜ್ಞಾನವೇ ಬ್ರಹ್ಮವೆಂದು ಅರಿತುಕೊಂಡನು. ಏಕೆಂದರೆ, ಸಮಷ್ಟಿ ಬುದ್ಧಿಯಿಂದಲೇ (ವಿಜ್ಞಾನ) ಎಲ್ಲ ಜೀವಭೂತಗಳೂ ಹುಟ್ಟಿಬರುತ್ತವೆ. ಹುಟ್ಟಿದ ಜೀವರಾಶಿಗಳು ಅದರಿಂದಲೇ ಜೀವಿಸುತ್ತವೆ. ಕಡೆಗೆ ವಿಜ್ಞಾನದ ಕುರಿತೇ ಮುಂದುವರೆಯುತ್ತ ಹೋಗಿ ಸೇರುತ್ತವೆ. ಹೀಗೆ ತಿಳಿದುಕೊಂಡರೂ ಭೃಗುವಿನ ಮನಸ್ಸು ತಲ್ಲಣವಾಗಿಯೇ ಇತ್ತು. ತಾನಿನ್ನೂ ಬ್ರಹ್ಮವಸ್ತುವಿನ ಬಗ್ಗೆ ಪೂರ್ತಿಯಾಗಿ ತಿಳಿದುಕೊಳ್ಳಲಿಲ್ಲವೆಂದು ಅವನಿಗೆ ಅನ್ನಿಸುತ್ತಿತ್ತು. ಹೀಗಾಗಿ ಅವನು ಮತ್ತೆ ತನ್ನ ತಂದೆಯಾದ ವರುಣನ ಹತ್ತಿರ ಹೋದನು. ''ಭಗವಂತನೇ ನನಗೆ ಬ್ರಹ್ಮವನ್ನು ಹೇಳಿಕೊಡು'' ಎಂದು ಪ್ರಾರ್ಥಿಸಿಕೊಂಡನು. ವರುಣನು ತಾನು ಹೇಳಿದ್ದನ್ನೇ ಮತ್ತೆ ಹೇಳಿದನು: ''ಮಗೂ, ತಪಸ್ಸಿನಿಂದಲೇ ಬ್ರಹ್ಮವನ್ನು ತಿಳಿದುಕೊಳ್ಳಲು ನೀನು ಇಚ್ಛಿಸಬೇಕಪ್ಪಾ. ಏಕೆಂದರೆ ಬ್ರಹ್ಮವನ್ನು ಅರಿತುಕೊಳ್ಳುವುದಕ್ಕೆ ತಪಸ್ಸೇ ಮುಖ್ಯಸಾಧನವಾಗಿದೆ. ಹೀಗಾಗಿ ಒಂದರ್ಥದಲ್ಲಿ ತಪಸ್ಸೇ ಬ್ರಹ್ಮ.''

ಭೃಗುವು ತನ್ನ ತಂದೆಯ ಆದೇಶದಂತೆ, ತನ್ನ ತಪಸ್ಸನ್ನು ಮುಂದುವರೆಸಿದನು. ಕಟ್ಟಕಡೆಗೆ, ಆನಂದವೇ ಬ್ರಹ್ಮವೆಂದು ಸಾಕ್ಷಾತ್ಕಾರ ಮಾಡಿಕೊಂಡನು. ಹೀಗೆ ಬ್ರಹ್ಮದ ಹೊರ ಪದರಗಳಾದ, ಅನ್ನ, ಪ್ರಾಣ, ಮನಸ್ಸು , ಬುದ್ಧಿಗಳನ್ನೇ ಬ್ರಹ್ಮವೆಂದು ಮೊದಲು ಮೊದಲು ತಿಳಿದುಕೊಂಡು, ಅನಂತರ ಅವುಗಳ ಒಳಗಿರುವ ಆನಂದವೇ ನೈಜ ಬ್ರಹ್ಮವೆಂದು ತಪಸ್ಸಿನ ಸಾಧನದಿಂದ ಅರಿತುಕೊಂಡನು. ನಿಜವಾಗಿಯೂ ಆನಂದರೂಪವಾದ ಬ್ರಹ್ಮನಿಂದಲೇ ಎಲ್ಲ ಜೀವರಾಶಿಗಳೂ ಹುಟ್ಟಿವೆ. ಎಲ್ಲ ಜೀವರಾಶಿಗಳು ಕೂಡ ಜೀವಿಸಿರುವುದು ಆನಂದರೂಪವಾದ ಬ್ರಹ್ಮನಲ್ಲಿಯೇ. ಜೀವನವೆಂದರೆ ಬ್ರಹ್ಮನ ಕಡೆಗೆ ಹೋಗುವುದೇ ಆಗಿದೆ. ಹೀಗೆ ಬ್ರಹ್ಮದ ಕಡೆಗೆ ಮುಂದುವರೆಯುತ್ತ, ಅವೆಲ್ಲವೂ ಬ್ರಹ್ಮವನ್ನೇ ಹೋಗಿ ಸೇರುತ್ತವೆ. ಈ ಸತ್ಯವನ್ನು ಅವನು ಚೆನ್ನಾಗಿ ಅರಿತನು.

ಈ ಬಾರಿ ಭೃಗುವು ತನ್ನ ತಂದೆಯ ಬಳಿ ಹೋಗಲಿಲ್ಲ. ಹೋಗುವ ಆವಶ್ಯಕತೆಯೂ ಇರಲಿಲ್ಲ. ಏಕೆಂದರೆ ಅವನು ಈಗ ಬ್ರಹ್ಮತತ್ತ್ವದ ನಿಜವಾದ ಸ್ವರೂಪವನ್ನು ಸಾಕ್ಷಾತ್ಕರಿಸಿಕೊಂಡಿದ್ದನು. ಅವನಲ್ಲಿ ಬ್ರಹ್ಮಾನಂದವು ಮನೆಮಾಡಿತ್ತು; ಸಂತೃಪ್ತಿಯು ಮನಸ್ಸಿನಲ್ಲಿ ತುಂಬಿಕೊಂಡಿತ್ತು; ಅಪಾರವಾದ ಶಾಂತಿಯು ಹೃದಯದಲ್ಲಿ ನೆಲೆಸಿತ್ತು.

ಉಪನಿಷತ್ತು ಭೃಗುವು ವರುಣನಿಂದ ಕಲಿತ ವಿದ್ಯೆಯನ್ನು ಬಹುವಾಗಿ ಹೊಗಳುತ್ತದೆ. '**ಭಾರ್ಗವೀ ವಾರುಣೀ ವಿದ್ಯೆ**' ಎಂದು ಅದನ್ನು ಹೆಸರಿಸುತ್ತದೆ. ಈ ವಿದ್ಯೆಯು ಹೃದಯಾಕಾಶದ ಗುಹೆಯಲ್ಲಿರುವ ಪರಮ ಅದ್ವಯಾನಂದದಲ್ಲಿ ಸಂಪನ್ನಗೊಂಡಿತು. ಅಂದರೆ, ಅನ್ನಮಯ ಆತ್ಮನಿಂದ ಹಿಡಿದು, ಆನಂದ ಆತ್ಮನಲ್ಲಿ ಪರಿಪೂರ್ಣಗೊಂಡಿತು. ಉಪನಿಷತ್ತು ಎಲ್ಲ ಸಾಧಕರಿಗೂ ಈ ಆಶ್ವಾಸನೆಯನ್ನು ನೀಡುತ್ತದೆ: ಭೃಗುವು ಮಾತ್ರವಲ್ಲ, ಯಾರು ಬೇಕಾದರೂ ಈ ತಪಸ್ಸಿನ ಸಾಧನದಿಂದ, ಇದೇ ಕ್ರಮದಿಂದ ಅಂತರಂಗದ ಒಳಹೊಕ್ಕು ಆನಂದವನ್ನು ಬ್ರಹ್ಮವೆಂದು ಅರಿತುಕೊಳ್ಳುತ್ತಾನೆಯೋ, ಅವನೂ ಕೂಡ ಈ ವಿದ್ಯೆಯ ಅಂತಿಮ ಧ್ಯೇಯವಾದ ಆನಂದವೆಂಬ ಪರಬ್ರಹ್ಮನಲ್ಲಿ ನೆಲೆನಿಲ್ಲುತ್ತಾನೆ. ಬ್ರಹ್ಮವನ್ನು ಅರಿತುಕೊಂಡು ಬ್ರಹ್ಮವೇ ಆಗಿಬಿಡುತ್ತಾನೆ. ಇದೇ ಈ ವಿದ್ಯೆಯ ಉತ್ಕೃಷ್ಟ ಫಲ.

ಈ ಬಗೆಯ ತಪಸ್ಸನ್ನು ಮಾಡಿದರೆ, ಈ ಲೋಕದಲ್ಲಿ ಪ್ರಾಪ್ತವಾಗುವ ಫಲವೂ ಇದೆ. ಆದರೆ ನಿಜವಾದ ಮುಮುಕ್ಷುವು ಇದಕ್ಕಾಗಿ ಆಸೆಪಟ್ಟು ಮೋಕ್ಷದ ಆಕಾಂಕ್ಷೆಯನ್ನು ಕಳೆದುಕೊಳ್ಳಬಾರದು. ಆದರೆ ಈ ತಪಸ್ಸಿನ ಮಾರ್ಗದ ಕಡೆಗೆ ಸಾಧಾರಣ ಜನರನ್ನು ಕೂಡ ಸೆಳೆಯಲು ಉಪನಿಷತ್ತು ಸಾಧಾರಣ ಫಲವನ್ನು ಕೂಡ ಹೇಳುತ್ತದೆ: ಅದೆಂದರೆ, ಈ ವಿದ್ಯೆಯನ್ನು ಕಲಿತವನು ಆಹಾರದ ವಿಷಯದಲ್ಲಿ ಯಾವ ಕೊರತೆಯನ್ನೂ ಹೊಂದುವುದಿಲ್ಲ, ಅನ್ನವಂತನಾಗಿರುತ್ತಾನೆ. ಇದಲ್ಲದೆ ಎಲ್ಲ ರೀತಿಯ ಸಂಪತ್ತೂ ಅವನದಾಗುತ್ತದೆ. ಜನಗಳು ಅವನ ವಶವಾಗುತ್ತಾರೆ; ಅನೇಕ ರೀತಿಯ ಪಶುಗಳು ಕೂಡ ಅವನ ಅಧಿಪತ್ಯಕ್ಕೆ ಬರುತ್ತವೆ. ಅವನು ಬ್ರಹ್ಮವರ್ಚಸ್ಸಿನಿಂದ ಕಂಗೊಳಿಸುತ್ತಾನೆ; ಎಲ್ಲರಿಗಿಂತಲೂ ದೊಡ್ಡವನಾಗುತ್ತಾನೆ; ಕೀರ್ತಿವಂತನಾಗುತ್ತಾನೆ.

ಆದರೆ ಉಪನಿಷತ್ತಿನ ಈ ವಿದ್ಯೆಯ ಗುರಿ ಮೇಲಿನ ಪ್ರಾಪಂಚಿಕ ಬಯಕೆಗಳನ್ನು ಪೂರೈಸಿಕೊಳ್ಳುವುದಲ್ಲ; ಮೋಕ್ಷವನ್ನು ಪಡೆದುಕೊಳ್ಳುವುದು. ಕೇವಲ ಬ್ರಹ್ಮವಿದ್ಯೆಯಿಂದ ಮಾತ್ರವೇ ಅದು ಸಾಧ್ಯ. ಬ್ರಹ್ಮವಿದ್ಯೆಯೇ ಮೋಕ್ಷದ ಸಾಧನ. ಆ ಸ್ಥಿತಿಯಲ್ಲಿ ಬ್ರಹ್ಮವನ್ನು ತಿಳಿದವನು ಬ್ರಹ್ಮನೇ ಆಗುತ್ತಾನೆ. ಬ್ರಹ್ಮನಾದವನು ಎಲ್ಲವೂ ಆಗುತ್ತಾನೆ; ಸರ್ವಭಾವವನ್ನು ಪಡೆಯುತ್ತಾನೆ. ಪರಿಶುದ್ಧ ಸತ್‌ರೂಪನಾಗುತ್ತಾನೆ; ಪರಿಶುದ್ಧ ಚಿತ್‌ರೂಪನಾಗುತ್ತಾನೆ; ಪರಿಶುದ್ಧ ಆನಂದರೂಪನಾಗುತ್ತಾನೆ.



# ಭಗವಂತನ ಕೃಪೆ

**ಕಥೆ : ಸ್ವಾಮಿ ವಿಮೂರ್ತಾನಂದ**

**ಚಿತ್ರ : ಪದ್ಮವಾಸನ್**



1



ಒಂದು ಸಲ ಸುರೇಂದ್ರನಾಥ ಮಿತ್ರನು ಶ್ರೀರಾಮಕೃಷ್ಣರನ್ನು ತನ್ನ ಮನೆಗೆ ಆಹ್ವಾನಿಸಿದ. ಅವನು ಮೊದಲು ಕುಡುಕನಾಗಿದ್ದ. ಆದರೆ ಶ್ರೀರಾಮಕೃಷ್ಣರ ಪ್ರೀತಿ ಅವನನ್ನು ಶ್ರೇಷ್ಠ ಭಕ್ತನನ್ನಾಗಿ ಪರಿವರ್ತಿಸಿತು. ಆದರೂ ಅವನಲ್ಲಿ ಜಂಭ, ಅಹಂಕಾರಗಳು ಇನ್ನೂ ಇದ್ದವು.






**4** ಸುರೇಂದ್ರ ಹಾರವನ್ನು ತಂದ..




ಹೀಗೆ ಹೇಳುತ್ತ ಸುರೇಂದ್ರನು ಜಂಭದಿಂದ ಶ್ರೀರಾಮಕೃಷ್ಣರಿಗೆ ಹಾರವನ್ನು ಹಾಕಲು ಮುಂದಾದ. ಆಗ ಎಲ್ಲರಿಗೂ ಆಶ್ಚರ್ಯವಾಗುವಂತೆ..

**5** ಶ್ರೀರಾಮಕೃಷ್ಣರು ಹಾರವನ್ನು ಕೈಯಲ್ಲಿ ತೆಗೆದುಕೊಂಡು ಪಕ್ಕಕ್ಕೆ ಎಸೆದುಬಿಟ್ಟರು. ಅವರ ನರ್ತನ ಮುಂದುವರಿಯಿತು.




**6** ಸುರೇಂದ್ರನ ಜಂಭಕ್ಕೆ ಚೆನ್ನಾಗಿ ಏಟು ಬಿತ್ತು. ಅವನು ಕೂಡಲೇ ಅಲ್ಲಿಂದ ಹೊರಟುಹೋದ. ಶ್ರೀರಾಮಕೃಷ್ಣರು ತನಗೆ ಗೌರವ ನೀಡಲಿಲ್ಲವೆಂದು ಅವನು ಭಾವಿಸಿದ. ತನ್ನ ಸ್ನೇಹಿತರಿಗೆ ಹೇಳಿದ..




**7** ಸುರೇಂದ್ರನಿಗೆ ನಿಯಂತ್ರಣ ತಪ್ಪಿ ಹೋಯಿತು. ಆದರೂ ಅವನು ಶ್ರೀರಾಮಕೃಷ್ಣರ ಭಕ್ತನಾಗಿದ್ದ. ಅವನಿಗೆ ಬೇಗನೆ ತನ್ನ ತಪ್ಪಿನ ಅರಿವಾಯಿತು.




8
ಅವನ ಸ್ನೇಹಿತರು ಅವನನ್ನು ಸಮಾಧಾನಪಡಿಸಿದರು.
ಠಾಕೂರರು ಖಂಡಿತ ನಿನ್ನನ್ನು ಕ್ಷಮಿಸುವರು. ನಿನಗೆ ಅಷ್ಟು ತಿಳಿಯದೆ?
ನನ್ನ ವರ್ತನೆ ನನಗೆ ಅಸಹ್ಯವೆನಿಸುತ್ತಿದೆ. ಯಾರಲ್ಲಿ ಅಹಂಕಾರವಿಲ್ಲವೋ ಅವರ ಮೇಲೆ ಮಾತ್ರ ಭಗವಂತನ ಕೃಪೆ ಯಾಗುವುದು. ಠಾಕೂರರ ಕೃಪೆಯನ್ನು ಹೊಂದುವ ಯೋಗ್ಯತೆ ನನಗಿಲ್ಲ. ಅವರ ಕೃಪೆ ನನ್ನ ಮೇಲಾಗದಿದ್ದರೆ, ನಾನು ಬದುಕಿ ಪ್ರಯೋಜನವೇನು? ನನಗೆ ಜೀವನವೇ ಸಾಕೆನಿಸಿಬಿಟ್ಟಿದೆ.


9
ಈ ರೀತಿ ಒಂದೆಡೆ ಸುರೇಂದ್ರನು ತನ್ನ ಸ್ನೇಹಿತರೊಂದಿಗೆ ಗೋಳಾಡುತ್ತಿದ್ದಾಗ...
...ಇನ್ನೊಂದೆಡೆ ಉಳಿದೆಲ್ಲ ಭಕ್ತರು ಶ್ರೀರಾಮಕೃಷ್ಣರೊಂದಿಗೆ ಹಾಡುತ್ತ ನರ್ತಿಸುತ್ತಿದ್ದರು. ಅವರೆಲ್ಲ ಪರಮಾನಂದವನ್ನು ಅನುಭವಿಸಿದರು.


10
ಸುರೇಂದ್ರನು ತನ್ನ ತಪ್ಪನ್ನರಿತು ಪಶ್ಚಾತ್ತಾಪಪಟ್ಟುಕೊಂಡ. ಇದರಿಂದ ಅವನ ಅಹಂಕಾರ ನುಚ್ಚುನೂರಾಗಿ, ಸಂಪೂರ್ಣ ತೊಲಗಿ ಹೋಯಿತು. ಶ್ರೀರಾಮಕೃಷ್ಣರು ಮೊದಲು ಎಸೆದು ಬಿಟ್ಟಿದ್ದ ಅದೇ ಹಾರವನ್ನು ಈಗ ತಮಗೆ ತಾವೇ ಹಾಕಿ ಅಲಂಕರಿಸಿಕೊಂಡರು.


11
ಸುರೇಂದ್ರ ! ಎಲ್ಲಿಗೆ ಹೋಗಿದ್ದೆ ನೀನು? ಇಲ್ಲಿ ನೋಡು! ಗುರುದೇವರು ನಿನ್ನ ಹಾರವನ್ನು ಹಾಕಿಕೊಂಡು ಭಾವೋನ್ಮತ್ತರಾಗಿ ನರ್ತಿಸುತ್ತಿದ್ದಾರೆ.
ಆಹ! ಠಾಕೂರರ ಕೃಪೆ ಎಂತಹದೆಂದು ವರ್ಣಿಸಲು ಪದಗಳೇ ಇಲ್ಲ. ಈ ಮೊದಲು ಅವರ ಕೃಪೆಯಾಗದಂತೆ ನನ್ನ ಅಹಂಕಾರವೇ ಅಡ್ಡಿ ಯಾಗುತ್ತಿತ್ತು . ದೀನರು, ವಿನಯವಂತರು ಮಾತ್ರ ಅವರ ಪ್ರೀತಿಗೆ ಪಾತ್ರರಾಗುತ್ತಾರೆ. ನನ್ನ ಅಹಂಕಾರವನ್ನು ತೊಲಗಿಸಿದ ಅವರಿಗೆ ನಾನು ಸಾವಿರ ಪ್ರಣಾಮ ಸಲ್ಲಿಸುತ್ತೇನೆ!

12

ಪ್ರೇಮೋನ್ಮತ್ತ ನರ್ತನದ ನಂತರ ಶ್ರೀರಾಮಕೃಷ್ಣರು ಆ ಹಾರವನ್ನು ಧರಿಸಿಕೊಂಡೇ ಭಕ್ತರೊಡನೆ ಮಾತುಕತೆ ನಡೆಸಿದರು.




13

ಸುರೇಂದ್ರನು ಸಂಪೂರ್ಣವಾಗಿ ಪರಿವರ್ತನೆ ಹೊಂದಿದ್ದ. ಶ್ರೀರಾಮಕೃಷ್ಣರು ಸಮಾಧಿಯಲ್ಲಿದ್ದಾಗ ಅವರಿಗೆ ಬಾಹ್ಯಜಗತ್ತಿನ ಅರಿವು ಸ್ವಲ್ಪವೂ ಇರಲಿಲ್ಲ. ಆದ್ದರಿಂದ ಸುರೇಂದ್ರನಿಗೆ ಏನಾಯಿತು ಎಂದು ಅವರಿಗೆ ತಿಳಿದಿರಲಿಲ್ಲ. ಬಾಹ್ಯಪ್ರಜ್ಞೆಗೆ ಮರಳಿದಾಗ ಅವರು ಸುರೇಂದ್ರನನ್ನು ಕೇಳಿದರು.




14






ಸುರೇಂದ್ರನಾಥ ಮಿತ್ರನು ಶ್ರೀರಾಮಕೃಷ್ಣರ ಎಲ್ಲ ಅಗತ್ಯಗಳನ್ನೂ ಪೂರೈಸಿದ ನಾಲ್ವರು 'ರಸದ್ದಾರ'ರಲ್ಲಿ ಒಬ್ಬನಾಗಿದ್ದ. ಅವರ ಮಹಾಸಮಾಧಿಯ ನಂತರವೂ ಅವನು ತನ್ನ ಸೇವೆಯನ್ನು ಮುಂದುವರಿಸಿದ. ಮುಂದೆ ವಿಶ್ವವಿಖ್ಯಾತವಾದ ರಾಮಕೃಷ್ಣ ಮಹಾಸಂಘವನ್ನು ಸ್ಥಾಪಿಸಲು ಸ್ವಾಮಿ ವಿವೇಕಾನಂದರಿಗೆ ನೆರವಾದವರಲ್ಲಿ ಸುರೇಂದ್ರನೇ ಮೊದಲಿಗನಾಗಿದ್ದ.




ಖೇತ್ರಿ ಆಶ್ರಮ




# ರಾಮಕೃಷ್ಣ ಮಹಾಸಂಘದ ಏಪ್ರಿಲ್ ತಿಂಗಳ ಚಟುವಟಿಕೆಗಳು

**ಹೊಸ ಶಾಖಾ ಕೇಂದ್ರ :** ಇತ್ತೀಚಿನವರೆಗೆ ರಾಮಕೃಷ್ಣ ಮಠ, ಶ್ಯಾಮಪುಕುರ ಇದರ ಉಪ ಶಾಖಾಕೇಂದ್ರವಾಗಿದ್ದ **ಕಥಾಮೃತ ಭವನವು** ಈಗ ಪ್ರತ್ಯೇಕ ಶಾಖಾಕೇಂದ್ರವಾಗಿ ಪರಿವರ್ತಿತವಾಗಿದೆ.

**ಸ್ವಾಮಿ ವಿವೇಕಾನಂದರ ಚಿಕಾಗೋ ಭಾಷಣದ ೧೨ನೇ ವಾರ್ಷಿಕೋತ್ಸವ:** **ಆಂಟ್‌ಪುರ** ಆಶ್ರಮವು ಏಪ್ರಿಲ್ ೧೫ರಂದು ನಡೆಸಿದ ಸಾರ್ವಜನಿಕ ಸಭೆಯಲ್ಲಿ ೩೫೦ ಮಂದಿ ಭಕ್ತರು ಭಾಗವಹಿಸಿದ್ದರು. **ಗದಾಧರ ಆಶ್ರಮ**, ಕೋಲ್ಕತ್ತಾ ಕೇಂದ್ರವು ಏಪ್ರಿಲ್ ೧೦ರಂದು ಹೂಗ್ಲಿ ಜಿಲ್ಲೆಯ ಒಂದು ಶಾಖೆಯಲ್ಲಿ ನಡೆಸಿದ ಉಪನ್ಯಾಸ ಕಾರ್ಯಕ್ರಮದಲ್ಲಿ ೨೦೦ ಮಂದಿ ವಿದ್ಯಾರ್ಥಿಗಳು ಹಾಗೂ ಅಧ್ಯಾಪಕರು ಭಾಗವಹಿಸಿದ್ದರು. **ಕಾಂಕುರಗಾಚಿ** ಆಶ್ರಮವು ಏಪ್ರಿಲ್ ೨೮ರಂದು ನಡೆಸಿದ ಆಧ್ಯಾತ್ಮಿಕ ಶಿಬಿರದಲ್ಲಿ ೪೪೬ ಮಂದಿ ಭಕ್ತರು ಭಾಗವಹಿಸಿದ್ದರು. **ಮಂಗಳೂರು** ಆಶ್ರಮವು ಏಪ್ರಿಲ್ ತಿಂಗಳಲ್ಲಿ ೧೦ ವಿವಿಧ ಕಾಲೇಜುಗಳಲ್ಲಿ ನಡೆಸಿದ ಭಾಷಣ ಕಾರ್ಯಕ್ರಮಗಳಲ್ಲಿ ೨೧೫೦ ಯುವಕ-ಯುವತಿಯರು ಭಾಗವಹಿಸಿದ್ದರು.

**ಶಾಖಾಕೇಂದ್ರಗಳ ಚಟುವಟಿಕೆಗಳು :** **ಖೇತ್ರಿ ಆಶ್ರಮ**ದ ನವೀಕರಣಗೊಂಡ **ಫತೇ ಬಿಲ್ಲಾಸ್ ಅರಮನೆ**ಯನ್ನು ಮಾರ್ಚ್ ೩೧ರಂದು ಪ್ರಧಾನ ಕಾರ್ಯದರ್ಶಿಗಳಾದ ಸ್ವಾಮಿ ಸುವೀರಾನಂದಜಿಯವರು ಉದ್ಘಾಟಿಸಿದರು. ಈ ಅರಮನೆಯಲ್ಲಿ ಸ್ವಾಮಿ ವಿವೇಕಾನಂದರು ೧೮೯೧ರಲ್ಲಿ ಹಾಗೂ ೧೮೯೩ರಲ್ಲಿ ಆಗಿನ ಮಹಾರಾಜರಾಗಿದ್ದ ರಾಜಾ ಅಜಿತ್‌ಸಿಂಗ್‌ನ ಅತಿಥಿಯಾಗಿ ತಂಗಿದ್ದರು. ಈ ಅರಮನೆಯಲ್ಲಿ ಈಗ ನಿರ್ಮಿಸಿರುವ **ಅಜಿತ್ -ವಿವೇಕ ವಸ್ತುಪ್ರದರ್ಶನಾಲಯ**ವನ್ನು ಕೂಡ ಪ್ರಧಾನ ಕಾರ್ಯದರ್ಶಿಯವರು ಉದ್ಘಾಟಿಸಿದರು. ಉದ್ಘಾಟನಾ ಕಾರ್ಯಕ್ರಮದ ಅಂಗವಾಗಿ ಮಾರ್ಚ್ ೩೦ ಹಾಗೂ ೩೧ರಂದು ಸಾರ್ವಜನಿಕ ಸಭೆ ಹಾಗೂ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಆಯೋಜಿಸಲಾಗಿತ್ತು. ಖೇತ್ರಿ ಆಶ್ರಮದ ವಜ್ರಮಹೋತ್ಸವದ ಅಂಗವಾಗಿ ಈ ಕಾರ್ಯಕ್ರಮಗಳು ನಡೆದವು. ಸುಮಾರು ೫೦ ಮಂದಿ ಸಂನ್ಯಾಸಿಗಳು ಹಾಗೂ ೪೦೦ ಮಂದಿ ಭಕ್ತರು, ಹಿತೈಷಿಗಳು ಈ ಎರಡು ದಿನಗಳ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು. **ಬಾರಾನಗರ ಮಠ**ದಲ್ಲಿ ಏಪ್ರಿಲ್ ೨೮ ರಂದು ರಾಮಕೃಷ್ಣ ಮಹಾಸಂಘದ ಪರಮಾಧ್ಯಕ್ಷರಾದ ಶ್ರೀಮತ್ ಸ್ವಾಮಿ ಸ್ಮರಣಾನಂದಜಿ ಮಹಾರಾಜ್ ಅವರು ಉದ್ದೇಶಿತ ಡಿಸ್ಪೆನ್ಸರಿ ಹಾಗೂ ಅನೌಪಚಾರಿಕ ಶಾಲೆಯ ಕಟ್ಟಡದ ಶಿಲಾನ್ಯಾಸ ಕಾರ್ಯಕ್ರಮವನ್ನು ನೆರವೇರಿಸಿದರು. ಉಪಾಧ್ಯಕ್ಷರಾದ ಸ್ವಾಮಿ ವಾಗೀಶಾನಂದಜಿ ಮಹಾರಾಜ್, ಪ್ರಧಾನ ಕಾರ್ಯದರ್ಶಿಗಳು, ಹಾಗೂ ಸುಮಾರು ೩೦೦ ಮಂದಿ ಸಂನ್ಯಾಸಿಗಳು, ೩೦೦೦ಕ್ಕೂ ಹೆಚ್ಚು ಭಕ್ತರು ಈ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು. **ಬೆಂಗಳೂರು, ಕೊಚ್ಚಿ, ಪೊನ್ನಂಪೇಟೆ** ಆಶ್ರಮಗಳಲ್ಲಿ ಏಪ್ರಿಲ್ ತಿಂಗಳಲ್ಲಿ ಬೇಸಿಗೆ ಶಿಬಿರಗಳು ನಡೆದವು.

ಭಾರತ ಸರ್ಕಾರದ ಮಾನವ ಸಂಪನ್ಮೂಲ ಸಚಿವಾಲಯದ ನ್ಯಾಷನಲ್ ಇನ್‌ಸ್ಟಿಟ್ಯೂಷನಲ್ ರ್‍ಯಾಂಕಿಂಗ್ ಫ್ರೇಮ್‌ವರ್ಕ್(NIRF) ಸಂಸ್ಥೆಯ ವತಿಯಿಂದ ೨೦೧೯ ನೇ ಇಸವಿಯಲ್ಲಿ ತಯಾರಿಸಿದ ಪಟ್ಟಿಯಲ್ಲಿ ರಾಮಕೃಷ್ಣ ಮಹಾಸಂಘದ ನಾಲ್ಕು ಪದವಿ ಕಾಲೇಜುಗಳು ಉತ್ತಮ ಸ್ಥಾನವನ್ನು ಗಳಿಸಿವೆ. ಈ ಕಾಲೇಜುಗಳ ವಿವರ: ೧) ವಿವೇಕಾನಂದ ಸೆಂಟಿನರಿ ಕಾಲೇಜು, **ರಹರಾ** (ರಾಷ್ಟ್ರೀಯ ರ್‍ಯಾಂಕ್-೮, ಪ.ಬಂಗಾಳ ರಾಜ್ಯ ರ್‍ಯಾಂಕ್-೧) ೨) **ವಿದ್ಯಾಮಂದಿರ**, ಶಾರದಾಪೀಠ (ರಾಷ್ಟ್ರೀಯ ರ್‍ಯಾಂಕ್-೧೧, ಪ.ಬಂಗಾಳ ರಾಜ್ಯ ರ್‍ಯಾಂಕ್-೩) ೩) ರೆಸಿಡೆನ್ಷಿಯಲ್ ಕಾಲೇಜು, **ನರೇಂದ್ರಪುರ** (ರಾಷ್ಟ್ರೀಯ ರ್‍ಯಾಂಕ್-೧೫, ಪ.ಬಂಗಾಳ ರಾಜ್ಯ ರ್‍ಯಾಂಕ್-೪), ೪) ಆರ್ಟ್ಸ್-ಸೈನ್ಸ್ ಕಾಲೇಜು, **ಕೊಯಮತ್ತೂರು ಮಿಷನ್** (ರಾಷ್ಟ್ರೀಯ ರ್‍ಯಾಂಕ್-೫೯, ತಮಿಳುನಾಡು ರಾಜ್ಯ ರ್‍ಯಾಂಕ್-೧೮)

ಬಾಗ್ದಾ ಆಶ್ರಮ



## ಮೌಲ್ಯ ಶಿಕ್ಷಣ ಹಾಗೂ ಯುವಸಮ್ಮೇಳನಗಳು

**ಬಾಗ್ದಾ** ಆಶ್ರಮವು ಪುರುಲಿಯಾ ಜಿಲ್ಲೆಯ ೧೩ ಶಾಲೆಗಳಲ್ಲಿ ಫಬ್ರವರಿ ೭ರಿಂದ ಮಾರ್ಚ್ ೨೯ರ ವರೆಗೆ ೧೪ ಮೌಲ್ಯ ಶಿಕ್ಷಣ ಕಾರ್ಯಕ್ರಮಗಳನ್ನು ನಡೆಸಿತು. ಇದರಲ್ಲಿ ೨೭೦೦ ವಿದ್ಯಾರ್ಥಿಗಳು ಹಾಗೂ ೧೦೦ ಮಂದಿ ಅಧ್ಯಾಪಕರು ಭಾಗವಹಿಸಿದ್ದರು. **ದೆಹಲಿ** ಆಶ್ರಮವು ಏಪ್ರಿಲ್ ೩ ರಿಂದ ೨೬ರ ವರೆಗೆ ಭಾರತದಾದ್ಯಂತ ೧೨ ನಗರಗಳಲ್ಲಿ ನಡೆಸಿದ ೨೬ ಮೌಲ್ಯ ಶಿಕ್ಷಣ ವಿಚಾರ ಸಂಕಿರಣಗಳಲ್ಲಿ ೧೭೪೫ ಅಧ್ಯಾಪಕರು ಹಾಗೂ ೯೩ ಪ್ರಾಂಶುಪಾಲರು ಭಾಗವಹಿಸಿದ್ದರು. **ರಾಜ್‌ಕೋಟ್** ಆಶ್ರಮವು ಏಪ್ರಿಲ್ ೧೬, ೧೮ ಹಾಗೂ ೨೦ರಂದು ನಡೆಸಿದ ಮೂರು ಮೌಲ್ಯ ಶಿಕ್ಷಣ ಕಾರ್ಯಕ್ರಮಗಳಲ್ಲಿ ೧೯೫ ಮಂದಿ ವಿದ್ಯಾರ್ಥಿಗಳು ಭಾಗವಹಿಸಿದ್ದರು. ಏಪ್ರಿಲ್ ೧೭ರಂದು ನಡೆದ ಮಾನವ ಶ್ರೇಷ್ಠತಾ ಕಾರ್ಯಕ್ರಮದಲ್ಲಿ ೫೬ ಮಂದಿ ಬ್ಯಾಂಕ್ ಆಫೀಸರುಗಳು ಪಾಲ್ಗೊಂಡಿದ್ದರು.

Managing Editor : Swami Muktidananda
Editor : Swami Jnanayogananda
Printed and Published by Swami Atmajnananda, on behalf of Sri Ramakrishna Ashrama, Yadavagiri, Mysore and Printed at Mayur Graphics, No.C-12, Industrial Estate, Rajaji Nagar, Bangalore -560 010 and published at Sri Ramakrishna Ashrama, Yadavagiri, Mysore -570 020

# ಆರ್ಕಿಡ್ ಟ್ರಾವೆಲ್ & ಟೂರ್ಸ್

Orchid Travel & Tours

**www.orchidtours.net**

## 8 ದಿನಗಳ ಶ್ರೀ ಮುಕ್ತಿನಾಥ ಯಾತ್ರೆ (ಸಾಲಿಗ್ರಾಮಂ) ಬೆಂಗಳೂರಿನಿಂದ ವಿಮಾನದಲ್ಲಿ



ಪ್ರವಾಸ ಸ್ಥಳಗಳು : ಶ್ರೀ ಮುಕ್ತಿನಾಥ ದೇವಸ್ಥಾನ, ಪಶುಪತಿನಾಥ ದೇವಸ್ಥಾನ, ಜಲನಾರಾಯಣ ದೇವಸ್ಥಾನ, ಶ್ರೀ ಕೃಷ್ಣ ದೇವಸ್ಥಾನ, ಕಠ್ಮಂಡು ಸಿಟಿ ಟೂರ್, ಪೋಕ್ರಾ-ಬಿಂದಾಬಾಸಿನಿ ದೇವಸ್ಥಾನ, ತಾಲಭೈರವಿ ದೇವಸ್ಥಾನ, ದೋಣಿಯಲ್ಲಿ ಪೋಕ್ರಾ ಲೇಕ್ ಒಂದು ವಿಹಾರ, ಮನೋಕಾಮನ ದೇವಸ್ಥಾನ (ಕೇಬಲ್ ಕಾರ್‌ನಲ್ಲಿ)

## 11 ದಿನಗಳ ಸಿಂಗಾಪುರ-ಮಲೇಶಿಯ-ಥೈಲ್ಯಾಂಡ್ ಪ್ರವಾಸ



**ಸಿಂಗಾಪುರ** : ಸಿಟಿ ಟೂರ್, ಸೆಂಟೋಸ ಐಲ್ಯಾಂಡ್ ಜೊತೆಗೆ ಸಿ ಅಕ್ವೇರಿಯಂ, ವಿಂಗ್ಸ್ ಆಫ್ ಟೈಮ್, ಜುರೋಂಗ್ ಬರ್ಡ್‌ಪಾರ್ಕ್, ಯುನಿವರ್ಸಲ್ ಸ್ಟುಡಿಯೋ,

**ಮಲೇಶಿಯ** : ಕೌಲಾಲಂಪುರ್ ಸಿಟಿ ಟೂರ್, ಬಾಟು ಗುಹೆ, ಪುತ್ರಜಯ, ಜಂಟಿಂಗ್ ಹೈಲ್ಯಾಂಡ್, ಕೆ.ಎಲ್. ಟವರ್

**ಥೈಲ್ಯಾಂಡ್** : ಪಟ್ಟಾಯ, ಕೋರಲ್ ಐಲ್ಯಾಂಡ್, ಸಫಾರಿ ವರ್ಲ್ಡ್ ಹಾಗೂ ಬ್ಯಾಂಕಾಕ್ ಸಿಟಿ ಟೂರ್, ಮರೀನಾ ಪಾರ್ಕ್, ವಾಕರ್ ಸ್ಟ್ರೀಟ್

## 15 ಮತ್ತು 18 ದಿನಗಳ ಗ್ರ್ಯಾಂಡ್ ಯು.ಕೆ.-ಯುರೋಪ್ ಪ್ರವಾಸ



ಯು.ಕೆ. ಫ್ರಾನ್ಸ್, ಬೆಲ್ಜಿಯಂ, ನೆದರ್‌ಲ್ಯಾಂಡ್, ಜರ್ಮನಿ, ಸ್ವಿಟ್ಜರ್‌ಲ್ಯಾಂಡ್, ಆಸ್ಟ್ರೀಯಾ, ಲಿಚೆನ್‌ಟೆನ್‌ಸ್ಟೈನ್, ಇಟಲಿ, ವ್ಯಾಟಿಕನ್

## 18 ಮತ್ತು 12 ದಿನಗಳ ಅಮೇರಿಕಾ ಪ್ರವಾಸ



ಪ್ರವಾಸ ಸ್ಥಳ : ನ್ಯೂಯಾರ್ಕ್, ವಾಷಿಂಗ್ಟನ್, ನಯಾಗರ ಫಾಲ್ಸ್, ಲಾಸ್‌ವೆಗಾಸ್, ಲಾಸ್ ಎಂಜಲೀಸ್, ಸ್ಯಾನ್‌ಫ್ರಾನ್ಸಿಸ್‌ಕೋ

## 8 ದಿನಗಳ ಕಾಂಬೋಡಿಯಾ ಥೈಲ್ಯಾಂಡ್ ಪ್ರವಾಸ



ಪ್ರವಾಸ ಸ್ಥಳ : ಕಾಂಬೋಡಿಯಾ – ಸಿಯಾಮ್‌ರಿಪ್, ಅಂಕೂರ್‌ವಾಟ್, ಟೋನ್ ಸ್ಯಾಪ್ ಸರೋವರ, ತಾಪ್ರಾಮ್, ಬಯಾನ್, ಬಪೂನ್ ದೇವಾಲಯಗಳು, ಥೈಲ್ಯಾಂಡ್ – ಪಟ್ಟಾಯ, ಕೋರಲ್ ಐಲ್ಯಾಂಡ್, ಸಫಾರಿ ವರ್ಲ್ಡ್ ಹಾಗೂ ಬ್ಯಾಂಕಾಕ್ ಸಿಟಿ ಟೂರ್, ವಾಕರ್ ಸ್ಟ್ರೀಟ್

## 7 ದಿನಗಳ ರಷ್ಯಾ ಪ್ರವಾಸ



ಮಾಸ್ಕೋ : ಕ್ರೆಮ್‌ಲಿನ್ ಗ್ರೌಂಡ್, ರೆಡ್ ಸ್ಕ್ವೇರ್, ರಷ್ಯಾ ಸರ್ಕಸ್, ಅಂಡರ್‌ಗ್ರೌಂಡ್ ಟೂರ್ ಆಫ್ ಮಾಸ್ಕೊ (ಮೆಟ್ರೊ), ಸಿಟಿ ಟೂರ್

ಸೆಂಟ್ ಪೀಟರ್ಸ್‌ಬರ್ಗ್ : ಗ್ರ್ಯಾಂಡ್ ಪ್ಯಾಲೇಸ್, ಪೀಟರ್ ಓಫ್ ಗಾರ್ಡನ್, ಹೆರ್ಮಿಟೇಜ್ ಮ್ಯೂಸಿಯಂ, ನೇವ ಬೋಟ್ ರೈಡ್, ಸೈಂಟ್ ಐಸಾಕ್ಸ್ ಕೆಥಡ್ರಲ್, ಸಿಟಿ ಟೂರ್

**For more details please Contact :**

Orchid Travel & Tours
BASAVANAGUDI
#98, 1st Floor, DVG Road
Office 080-26621983, 26617178
Mobile +91 9900080793 / 9880079588

Orchid Travel & Tours
MALLESHWARAM
# 198, 1st Floor, 11th Cross
Office 080 - 23445598, 23445559
Mobile +91 9900080791 / 9880079644

VIVEKA PRABHA (KANNADA MONTHLY)
June 2019, Vol.20, No.06, No.of pages: 44

Registered With Registrar of News Papers of India
under 72356/2000.postal Regn.No.KA/SK/MYS/480/
2018-20. LICENCED TO POST W.P.P. AT YADAVAGIRI
MYSORE 570 020. VIDE LICENCE NO. SK/WPP/MYS.155/2018-20



Printed at mayur graphics,Bangalore